ಸರಕಾರದ ಪಠ್ಯಪುಸ್ತಕ ರಚನಾ ಸಮಿತಿಯಿಂದ
ಪ್ರಕಟವಾದ

ಕನ್ನಡ ವಾಚನಮಾಲೆಯ

ನಾಲ್ಕನೆಯ ಪುಸ್ತಕದ

# ಶಬ್ದಾರ್ಥವು





ಪ್ರಕಾಶಕರು :

ಭಾರತ ಬುಕ್ ಡಿಪೊ, ಧಾರವಾಡ

೧೯೪೮ ಬೆಲೆ : ೦-೮-೦

ಬ ೨೯೭೭

# ನಾಲ್ಕನೆಯ ಪುಸ್ತಕದ ಶಬ್ದಾರ್ಥ

## ೧. ಧಾದಾಭಾಯಿ ನವರೋಜಿ

ದಾದಾಭಾಯಿಯವರು ಹಿಂದೀರಾಷ್ಟ್ರೀಯ ಸಭೆಯ ಆದ್ಯಪ್ರವರ್ತಕರು, ಪಾರ್ಸೀ ಧರ್ಮದವರು. ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೆಣಗಾಡಿದ ಮಹಾಪುರುಷರು. ಇಂಗ್ರೇಜಿ ಅಭ್ಯಾಸ ಮಾಡಿ ಶಿಕ್ಷಕರಾಗಿ ದುಡಿದರು. ಮಾದರಿಯ ಶಿಕ್ಷಕರಾಗಿದ್ದರು. ಸಾಮಾಜಿಕ ಕಾರ್ಯದಲ್ಲಿ ಮುಂದಾದವರು. ಲಂಡನಕ್ಕೆ ಹೋಗಿದ್ದರು. ಅಲ್ಲಿ ಪಾರ್ಲಿಮೆಂಟಿನ ಸಭಾಸದರಾಗಿ ಹಿಂದೀಯರ ಆಶೆ-ಆಕಾಂಕ್ಷೆಗಳನ್ನು ಆಂಗ್ಲರಿಗೆ ತಿಳಿಸಿದರು. ಬಡೋದೆ ಸಂಸ್ಥಾನದಲ್ಲಿ ಕೆಲದಿನ ದಿವಾನರಾಗಿದ್ದರು. ನಮ್ಮ ದೇಶದ ಇತಿಹಾಸವು ಇವರ ಹೆಸರನ್ನು ಸ್ವಾಗತಿಸುವದು. ಅವರ ಸಂಕ್ಷಿಪ್ತ ಚರಿತ್ರೆ ಈ ಪಾಠದಲ್ಲಿದೆ.

ಶಬ್ದಾರ್ಥ ಪರಿಚಯ 

ಅಧ್ಯಕ್ಷ=ಸಭಾಪತಿ;
ಕುಲೀನರು=ಸತ್ಕುಲದಲ್ಲಿ ಹುಟ್ಟಿದವರು
ಪಾರ್ಸಿಗಳು=ಇರಾಣದಿಂದ ಈ ದೇಶಕ್ಕೆ ಬಂದು ನೆಲಿಸಿದವರು
ವಾತ್ಸಲ್ಯ=ಪ್ರೀತಿ
ಬಿರುನುಡಿ=ಬಿರುಸುಮಾತು
ಸುಸೂತ್ರ=ತೊಂದರೆಯಿಲ್ಲದೆ
ಅಧ್ಯಾಪಕ=ಶಿಕ್ಷಕ
ಭ್ರಷ್ಟನು=ಕೆಟ್ಟವನು
ವೃತ್ತಿಯನ್ನು=ಉದ್ಯೋಗವನ್ನು
ನಿಷ್ಠೆಯಿಂದ=ಭಕ್ತಿಯಿಂದ
ವಿಚಾರವಾದಿ=ವಿಚಾರಹೇಳುವ
ಉನ್ನತಿಗಾಗಿ=ಹೆಚ್ಚಳಕ್ಕಾಗಿ
ಬಾಂಧವರು=ಅಣ್ಣತಮ್ಮಂದಿರು
ಭಾಷಣ=ವ್ಯಾಖ್ಯಾನ
ಆಂಗ್ಲರು=ಇಂಗ್ಲಿಷರು
ಸಹಾನುಭೂತಿ=ಕಳಕಳಿ
ಉಜ್ವಲ=ಹೆಚ್ಚಿನದು
ಆಡಳಿತೆಗಾರ=ಕಾರ್ಯಸಾಗಿಸುವವ
ಅಜರಾಮರ=ಯಾವಾಗಲೂ ಇರುವಂಥ

ಅಭ್ಯಸನಕ್ಕೆ ಉತ್ತರ

೧ ಶಿಕ್ಷಣಕಾರ್ಯದಲ್ಲಿ ವಿದ್ಯಾರ್ಥಿಗಳ ಪ್ರೀತಿಯನ್ನು ಸಂಪಾದಿಸಿ ಆದರ್ಶ (ಮಾದರಿ) ಶಿಕ್ಷಕರಾದರು.

೨ ಅನೇಕ ಸಂಘ ಸಂಸ್ಥೆಗಳನ್ನು ಹೊರಡಿಸಿದರು. ಪಾರ್ಲಿಮೆಂಟಿನಲ್ಲಿ ಸಭಾಸದ್ಯರಾಗಿ ಪ್ರವೇಶಿಸಿ ಹಿಂದುಸ್ಥಾನದ ನಿಜಸ್ಥಿತಿಯನ್ನು ಆಂಗ್ಲರಿಗೆ ತಿಳಿಸಿದರು.

೩ ಹಿಂದೀರಾಷ್ಟ್ರೀಯಸಭೆಯ ಅಧ್ಯಕ್ಷತೆ, ಬಡೋದೆಯ ದಿವಾಣಗಿರಿ ಬ್ರಿ.ಪಾರ್ಲಿಮೆಂಟಿನ ಸಭಾಸದತ್ವ ಈ ಎಲ್ಲ ಗೌರವಸ್ಥಾನಗಳನ್ನು ಪಡೆದಿದ್ದರು.

## ೨. ಮೊಲದ ಜಾಣತನ

'ಚಂದ್ರಪುಷ್ಕರಿಣಿ'ಯಲ್ಲಿ ಆನೆಗಳು ಹಿಂಡುಗಟ್ಟಿಕೊಂಡು ಬಂದು ಕ್ರೀಡಾಟ ನಡಿಸಿ ಸರೋವರದ ಇತರ ಪ್ರಾಣಿಗಳಿಗೆ ತೊಂದರೆಯನ್ನು ಕೊಡಹತ್ತಿದ್ದವು. ಸುತ್ತಲಿನ ವನಗಳನ್ನು ಹಾಳುಮಾಡುತ್ತಿದ್ದವು. ಇದರಿಂದ ಮೊಲ ಮೊದಲಾದ ಸಣ್ಣ ಪ್ರಾಣಿಗಳಿಗೆ ಅಲ್ಲಿ ಇರಲಿಕ್ಕೆ ತೊಂದರೆಯಾಯಿತು. ಒಂದು ಮೊಲವು ಹಂಚಿಕೆಯಿಂದ ಆನೆಗಳನ್ನು ಆ ಸರೋವರದಿಂದ ಬಿಡಿಸಿ ದೂರ ಹೋಗುವಂತೆ ಮಾಡಿತು. ಆ ಕಥೆಯು ಈ ಪಾಠದಲ್ಲಿ ಬಂದಿದೆ.

ಶಬ್ದಾರ್ಥ ಪರಿಚಯ

| | |
|---|---|
| ಬನಸಿರಿ=ವನದ ಐಶ್ವರ್ಯ, | ಹಂಚಿಕೆ=ಯುಕ್ತಿ |
| ಬತ್ತಲು=ಒಣಗಲು | ಪ್ರಶಾಂತಸಮಯ = ಗದ್ದಲವಿಲ್ಲದ ಕಾಲ |
| ಪುಷ್ಕರಿಣಿ=ಹೊಕ್ಕರಿಣಿ(ಹೊಂಡ) | ಕೋಪಗೊಳ್ಳು=ಸಿಟ್ಟಾಗು |
| ಸಮೇತವಾಗಿ=ಕೂಡಿಕೊಂಡು | ಭಾಸವಾಯಿತು=ಕಂಡುಬಂದಿತು |
| ದೂತ=ಸೇವಕ | ತಲೆದೂಗಿದವು=ಒಡಂಬಟ್ಟವು. |
| ನೆರೆಯಲ್ಲಿ=ಹತ್ತರದಲ್ಲಿ | |

ಅಭ್ಯಸನಗಳಿಗೆ ಉತ್ತರ

೧ ಚಂದ್ರಪುಷ್ಕರಿಣಿ ಎಂಬ ಕೆರೆಗೆ ಆನೆಗಳು ಬಂದವು.

೨ ನೀವು ದೊಡ್ಡವರು. ನಿಮ್ಮ ಜಲಕ್ರೀಡೆಯಿಂದ ನಮ್ಮ ಚಂದ್ರನು ಸಿಟ್ಟಾಗಿರುವನು. ಇದು ಆ ನಮ್ಮ ಯಜಮಾನ ಚಂದ್ರನ ಕೆರೆಯು. ಪ್ರತಿ ದಿನರಾತ್ರಿಯಲ್ಲಿ ಇಲ್ಲಿ ಬಂದು ಆತನು ಮಲಗುವನು. ಅವನ ನಿದ್ರೆಗೆ ಭಂಗ ಮಾಡಬೇಡಿರಿ. ನೀವು

ಈಗಲೆ ಇಲ್ಲಿಂದ ಹೊರಡಿರಿ. ಬಹಳದೂರ ಹೋಗಿರಿ....ಎಂದು ಹೇಳಿತು.

೩. ಆನೆಗಳೆಲ್ಲ ಚಂದ್ರನಿಗೆ ನಮಸ್ಕಾರಮಾಡಿ—'ದೇವಾ ನಮ್ಮನ್ನು ಕ್ಷಮಿಸು. ಈ ಸರೋವರಬಿಟ್ಟು ತಡಮಾಡದೆ ಹೋಗುವೆವು. ಇನ್ನೆಂದಿಗೂ ಇಲ್ಲಿಗೆ ನಾವು ಬರುವದಿಲ್ಲ? ಎಂದು ಹೇಳಿ ಅಲ್ಲಿಂದ ಹೋದವು.

೪

| ಹಲವು | ಇದರ | ವಿರುದ್ಧ | ಒಂದು |
|---|---|---|---|
| ಹಿರಿ | ,, | ,, | ಕಿರಿ |
| ತಿಳಿ | ,, | ,, | ರಾಡಿ |
| ದೂರ | ,, | ,, | ಸಮೀಪ |
| ಸುಖ | ,, | ,, | ಕಷ್ಟ (ದುಃಖ) |

೫ ನಿರಪರಾಧಿಗಳಮೇಲೆ **ಕೋಪಗೊಳ್ಳುವವನು** ಪಾಪಕ್ಕೆ **ಗುರಿಯಾಗುವನು.**

ಗೋವಿಂದನ ಆಶೆಗಳೆಲ್ಲ **ಬರಿಯಬಯಲಾ**ದವು

ಅರಣ್ಯದಲ್ಲಿ ಚರಿಸುವ ಪ್ರಾಣಿಗಳು **ಬಾಯಾರಿ ಬಳಲಿ**ದವು.

ನಾಯಿಯು ವಿಷಗೂಡಿದ ರೊಟ್ಟೀತಿಂದು **ತಲೆದೂಗ**ಹತ್ತಿತು.

## ೩. ಬಾಳೆ

ಈ ಪಾಠದಲ್ಲಿ ತೋಟದ ಮುಖ್ಯಪೈರಾದ ಬಾಳೆಯಗಿಡವನ್ನು ಬೆಳೆಸುವದು, ಪೋಷಣೆಮಾಡುವದು ಮೊದಲಾಗಿ ಅದರ ಫಲವು ಕೈಗೆ ಬರುವವರೆಗೆ ಮಾಡತಕ್ಕ ಕ್ರಮಗಳನ್ನೂ ಬಾಳೆಯ ಉಪಯೋಗವನ್ನೂ ಹೇಳಿರುವದು.

ಶಬ್ದಗಳ ಪರಿಚಯ

ಅನೇಕ=ಬಹಳ
ಗೊನೆ=ಹಣ್ಣಿನಗೊಂಚಲು
ನೆಡಬೇಕು=ಊರಬೇಕು
ನುಣುಪು=ಸಾಪು
ಹಣಿಗೆ=ದೇಟಿಗೆಹೊಂದಿದಹಣ್ಣಿನ ಸಾಲು
ಬಾಳು=ಜೀವನ
ಸತತ=ಬಿಟ್ಟುಬಿಡದೆ
ಸಂತತಿ=ವಂಶ
ಶೋಭೆ=ಚೆಂದ
ಎಲೆಮೂಡಿಗೆ=ಎಲೆಯ ಕಟ್ಟು
ನೆಟ್ಟು=ಊರಿ

## ಅಭ್ಯಸನಗಳಿಗೆ ಉತ್ತರ

೧ ತಗ್ಗು ತೋಡಿ ಗೊಬ್ಬರಹಾಕಿ ಸಸಿಯನ್ನು ಊರಬೇಕು.

೨ ಸಸಿಯು ಗಿಡವಾಗಿ ಬೆಳೆದಬಳಿಕ ಬಾಳೆಗೆ ಮೊಲೆಯೊಡೆಯುವದು. ಆ ಮೊಲೆಯೊಳಗಿನ ಹೂಗಳೇ ಕಾಯಿಗಳಾಗಿ ಹಣಿಗೆಯ ರೂಪವನ್ನು ಹೊಂದುವವು. ಎಲ್ಲ ಹಣಿಗೆಗಳಿಂದ ಕೂಡಿದ ಒಂದೇ ಗೊನೆಯು ಒಂದು ಬಾಳಿಗೆ ಆಗುವದು. ಈ ಕಾಯಿಗಳ ಗೊನೆಯನ್ನು ಕೊಯ್ದು ಕೆಲದಿನ ಇಡಲು ಹಣ್ಣುಗಳಾಗುವವು.

೩ ಕಾಯಿಯಾದ ಬಾಳೆಯಗಿಡದ ಬೊಡ್ಡೆಯಲ್ಲಿ ಮರಿಗಳು ಹುಟ್ಟುತ್ತವೆ. ಆ ಮರಿಗಳು ದೊಡ್ಡವಾಗಿ ಅವಕ್ಕೆ ಒಂದೊಂದು ಗೊನೆಯಾಗುತ್ತವೆ. ಹೀಗೆಯೇ ಬಾಳೆಯ ಪೀಳಿಗೆಯು ನಡೆಯುವದು.

೪ ಬಾಳೆಯಲ್ಲಿ ಹಣ್ಣಿನಗಾತ್ರ, ರುಚಿಗಳಮೇಲಿಂದ ಕದಳೀಬಾಳೆ, ಕರಿಬಾಳೆ, ಬೂದಿಬಾಳೆ, ಮಿಟ್ಟಿಬಾಳೆ ಇತ್ಯಾದಿ ಹಲವು ಪ್ರಕಾರಗಳಿವೆ.

೫ ಬಾಳೆಯ ಗಿಡದ ಪ್ರತಿಯೊಂದವಯವವು ಉಪಯೋಗಕ್ಕೆ ಬರುವದು, ಎಲೆಗಳು ಪತ್ರಾವಳಿಯಂತೆ ಹಾಸಿಕೊಂಡು ಉಣ್ಣಲು ಬರುತ್ತವೆ. ಹಣ್ಣು ದಿಂಡುಗಳು ತಿನ್ನಲು, ಬಾಳೆಯ ರಟ್ಟೆಗಳು ಕಟ್ಟಿಗೆಕಟ್ಟುವದಕ್ಕೆ, ಬಾಳೆಯಕಂಬಗಳು ಉತ್ಸವಪ್ರಸಂಗಗಳಲ್ಲಿ ಮಂಟಪ ಮೊದಲಾದವುಗಳಿಗೆ ಕಟ್ಟಲು ಬರುತ್ತವೆ-

೬ ಪಕ್ವವಾದ ಹಣ್ಣು ಕಿವುಚಿ ಹಾಲು-ಸಕ್ಕರೆ-ಸ್ವಲ್ಪ ಉಪ್ಪು ಹಾಕಿ ಸೀಕರಣೆ ಮಾಡುವರು.

೭ ಮಾವು, ಪೇರಲ, ಮೋಸಂಬೆ, ಸಂತರೆ, ಖರೂಜರ ಹುಣಿಸಿ, ಸೀತಾಫಳ, ರಾಮಫಳ, ಬಾಳೆ, ಕಂಚಿ ಗೆರೆ ಹಾಕಿದಹಣ್ಣು ಹುಳಿ—ಮಧುರ ವಿರುವವು.

೮ (ಅ) ಫಲಪ್ರಾಪ್ತಿಯಾದರೆ ಕರ್ಮವು ಮುಗಿದಂತೆ

(ಆ) ಉತ್ತಮಪದಾರ್ಥಗಳು ಬಹಳ ಕಡಿಮೆ.

೯ ನಿಬಂಧ. ಬಾಳೆಯ ವನದಬಗ್ಗೆ

## ಬಾಳೆಯ ವನ (ನಿಬಂಧ)

ಊರುಗಳ ಸುತ್ತಲು ತೋಟ ಪಟ್ಟಿಗಳು ಇದ್ದರೆ ಬಲು ಚೆಂದಕಾಣು ವವು. ಆದರೊಳಗಂತೂ ಬಾಳೆಯ ಬನಗಳು ಇದ್ದಲ್ಲಿ ಬಲು ಸೊಗಸೆನಿಸು ವದು. ಸಾಲು ಸಾಲಾಗಿ, ಹರವಾದ ಎಲೆಗಳಿಂದ ಕೂಡಿದ ಬಾಳೆಯಗಿಡ ಗಳು ಫಲಭರಿತವಾದ ಮೇಲೆ ಕೇಳುವದೇನು? ತೋಟದ ವನಸಿರಿಯು ಆ ಬನದಿಂದ ಒಡೆದು ಕಾಣುವದು.

ಉಳಿದ ವೃಕ್ಷಗಳು ವರ್ಷದ ಕೆಲವೊಂದು ಕಾಲದಲ್ಲಿ ಫಲಿಸುವವು. ಆದರೆ ಬಾಳೆಯ ಫಲಗಳು ಸದಾವಕಾಲದಲ್ಲಿ ಒಂದಿಲ್ಲೊಂದು ಗಿಡವು ಹಣ್ಣಿನ ಗೊನೆಯಿಂದ ಶೋಭಿತವಾಗಿರುವವು.

ಈ ಬಗೆಯಾಗಿ ಬಾಳೆಯ ಬನಗಳು ಉಳಿದ ಬನಗಳಿಗಿಂತ ಶ್ರೇಷ್ಠ ಬನಗಳೆನಿಸುವವು.

ನಾವೂ ನಮ್ಮ ತೋಟದಲ್ಲಿ ಬಾಳೆಯಗಿಡಗಳನ್ನು ನೆಟ್ಟು ಸುಂದರ ವಾದ ಬಾಳೆಯ ವನವನ್ನು ಸಿದ್ಧಪಡಿಸೋಣ.

---

## ೪. ನನ್ನ ಕನ್ನಡ ನಾಡು

### (ಕವಿತೆ)

ಈ ಪಾಠದಲ್ಲಿ ನನ್ನ ಕನ್ನಡ ನಾಡನ್ನು ಹೊಗಳಿದ ವರ್ಣನೆಯಿದೆ.

೧ನೆಯನುಡಿ **ಸರಳಅರ್ಥ**

ಇದು ನನ್ನ ನಾಡು; ನನ್ನ ಕನ್ನಡದನಾಡು; ಕರ್ನಾಟಕವೆಂಬ ರಾಗ ದಿಂದ ಹಾಡಿದ ನನ್ನ ಕನ್ನಡನಾಡು. ಕರ್ನಾಟಕವೇ ನನ್ನ ರಾಜ್ಯ ನೋಡು. ನನ್ನ ಸಂತೋಷದ ಮನೆಯು ಕನ್ನಡನಾಡು.

೨ನೆಯನುಡಿ **ಸರಳಅರ್ಥ**

ನಾನು ಕರ್ನಾಟಕದಲ್ಲಿ ಜನಿಸಿ ಕರ್ನಾಟಕದ ಹುಡಿಯಿಂದೆ ಪವಿತ್ರ ನಾದೆ. ಕರ್ನಾಟಕದ ಭಾಷೆಯಿಂದ ಸೊಬಗುಹೊಂದಿದೆ, ಕರ್ನಾಟಕದಲ್ಲಿ ಬೆಳೆದು.

೩ನೆಯನುಡಿ **ಸರಳಅರ್ಥ**

ಕನ್ನಡ ದೇಶದ ನುಡಿಯೂ, ಕನ್ನಡ ನಾಡಿನ ಸಿರಿಯೂ, ಜಗತ್ತಿನಲ್ಲಿ ಮತ್ತೆಲ್ಲಿಯೂ ನಾನು ಕಾಣೆನು. ಕನ್ನಡ ಕೋಗಿಲೆಯ ಮಂಜುಳವಾದ ಗಾಯನಕ್ಕೆ ದೇವರಾಣೆಯಾಗಿಯೂ ನಾನು ಮೆಚ್ಚಿದೆ.

## ೪ನೆಯನುಡಿ ಸರಳಅರ್ಥ

ಕನ್ನಡ ದೇಶದಲ್ಲಿ ಬೆಳೆಯುವ ಮುತ್ತಿನಂತಹ ಜೋಳವನ್ನೂ ಹವಳ ದಂತಿರುವ ಗೋದಿಯನ್ನೂ ಹೊತ್ತು ಹೊತ್ತಿಗೆ ಸವಿಸವಿಯ ತಿನಸುಗಳನ್ನೂ ತಿಂದು ಜೇನಿನಂಥ ತುಪ್ಪವನ್ನು ಸುರಿದು ನನ್ನ ಜೀವ ಬಲು ಸೊಗಸು ಗೊಂಡಿತು.

## ೫ನೆಯನುಡಿ ಸರಳಅರ್ಥ

ನಾನು ಕನ್ನಡನಾಡಿನಲ್ಲಿ ಹುಟ್ಟಿ ಮುಂಜಾವಿನಿಂದ ಸಂಜೆಯವರೆಗೆ ನನ್ನ ತಾಯಿಯಮೇಲೆ ಪದಗಳನ್ನು ಕಟ್ಟಿ ಕನ್ನಡನಾಡಿನ ಕಾಡಿನಲ್ಲಿಯೇ ಹಾಡಿ ಬಾಡುವೆನು.

## ಅಭ್ಯಸನಗಳಿಗೆ ಉತ್ತರ

೧ ಇಲ್ಲಿ ನನ್ನ ಕನ್ನಡನಾಡಿನ ವರ್ಣನೆಯಿದೆ.

೨ ಕವಿಯಲ್ಲಿ ಉಜ್ವಲವಾದ ನಾಡಿನ ಪ್ರೇಮವು ಕಂಡುಬರುವದು.

೩ ಕನ್ನಡವೆಂಬ ಹಕ್ಕಿ (ಕೋಗಿಲೆ)ಯ ಮಂಜುಲವಾದ ಗಾಯನಕ್ಕೆ ಮೆಚ್ಚಿದ್ದೇ ಎದೆಸೋಲಿಗೆ ಕಾರಣವು.

೪ ಕನ್ನಡ ದೇಶದಲ್ಲಿ ಬೆಳೆಯುವ ಜೋಳ–ಗೋದಿಗಳನ್ನು ಉಂಡು ವೇಳೆ ವೇಳೆಗೆ ಸವಿಸವಿತಿನಿಸುಗಳನ್ನು ತಿಂದು, ರುಚಿಕರವಾದ ತುಪ್ಪಹಾಲುಗಳನ್ನು ಸುರಿದು ಮನಸಿಗ ಸೊಗಸುಮಾಡಿ ಕೊಂಡನು.

೫ ಕನ್ನಡ ನಾಡಿನ ಕಾಡೇ ಆದರೂ ಕೂಡ ಆ ಕಾಡಿನಲ್ಲಿ ಬಾಡು ವೆನು ಎಂದು ನುಡಿದಿರುವನು.

| | |
|---|---|
| ೬ ಸೊಗಸಿನಮನೆ=ಸಂತಸದ ಬೀಡು | ಸುಂದರ=ಚೆಂದ |
| ಶುದ್ಧ=ಪಾವನ | ಮನಮೆಚ್ಚು=ಎದೆಸೋಲು |
| ಶೋಭಿಸು=ಚೆಂದಕಾಣು | ಚೆಂದ=ಸೊಗಸು |

## ೫. ವಾರದ ಮಲ್ಲಪ್ಪನವರು

ಸೊಲ್ಲಾಪುರದ ಪ್ರಸಿದ್ಧ ವ್ಯಾಪಾರಸ್ಥರು. ಶಿವಭಕ್ತರೂ ಅಹುದು. ಇಂದಿಗೂ ಅಲ್ಲಿ ಇವರ ಮನೆತನವಿದೆ. ಪ್ರಾಮಾಣಿಕತನದಿಂದ ಸಂಪಾದನೆ ಮಾಡಿ ಪರೋಪಕಾರಕ್ಕಾಗಿ ಕೈನೀಡಿ ದಾನಮಾಡಿ ಹೆಸರುವಾಸಿಯಾದ ಪುಣ್ಯವಂತರಿವರು. ಇವರ ಆದರ್ಶ ಚರಿತ್ರೆಯು ಈ ಪಾಠಿನಲ್ಲಿ ಬಂದಿದೆ.

ಶಬ್ದ ಪರಿಚಯ

ಶಿವಶರಣ=ಶಿವನಭಕ್ತ

ಆದರ್ಶಮನೆತನ=ಮಾದರಿಯ ಮನೆ

ಕುಶಾಗ್ರಬುದ್ಧಿ=ಚುರುಕುಬುದ್ಧಿ

ಪ್ರಾಮಾಣಿಕರು=ಸತ್ಯದಕಡೆಗೆ ಒಲವುಳ್ಳವರು

ಆಸಕ್ತಿ=ಪ್ರೀತಿ

ಮಾರ್ಗದರ್ಶಕರು=ದಾರಿತೋರಿಸುವವರು

ಶಾಸ್ತ್ರಾಧ್ಯಯನ=ಶಾಸ್ತ್ರಗಳ ಅಭ್ಯಾಸ

ಅನ್ನಛತ್ರ=ಬಡವರಿಗೆ ಉದಾರ ಬುದ್ಧಿಯಿಂದ ಊಟನೀಡುವ ಸ್ಥಾನ

ಸ್ಫೂರ್ತಿ=ಹುರುಪು

ಅಭ್ಯಾಸನಗಳಿಗೆ ಉತ್ತರ

೧ ಶಿವಭಕ್ತಿಯಲ್ಲಿ ಹೆಸರಾದ ಮನೆತನವು ಇವರದು.

೨ ವ್ಯಾಪಾರದ ಬಳಕೆಗೆ ಬೇಕಾಗುವಷ್ಟು ವಿದ್ಯೆಯು ಪ್ರಾಪ್ತವಾದ ಕೂಡಲೆ ಇವರ ತಂಡೆಗೆ ಅಷ್ಟೇ ಸಾಕೆನಿಸಿ ಹೆಚ್ಚಿಗೆ ವಿದ್ಯೆಕಲಿಸುವದು ಬೇಡಾಯಿತು.

೩ ಮುಂಬೈದಂಥ ದೂರಿನ ಪಟ್ಟಣಗಳಿಂದ ಮಾಲುತರಿಸುವದೂ ಕಳಿಸುವದೂ ಇವರ ಪ್ರಾಮಾಣಿಕತನದಿಂದ ಬೆಳೆಯಿತು. ಆದರಿಂದ ಇವರು ಒಳ್ಳೆ ವ್ಯಾಪಾರಸ್ಥರೆಂದು ಹೆಸರಾಗಿದ್ದರು.

೪ ಸುಧಾರಿಸಿದ ಪದ್ಧತಿಯ ಒಕ್ಕಲತನದಿಂದ ಒಕ್ಕಲಿಗನಿಗೆ ಹೆಚ್ಚು ಲಾಭವಾಗುವದೆಂದು ಇವರು ಸ್ವತಃ ಒಕ್ಕಲತನವಿಟ್ಟು ಅನುಭವ ಪಡೆದರು. ತಮ್ಮ ಅನುಭವವನ್ನು ಒಕ್ಕಲಿಗರಿಗೆ ತಿಳಿಸಿ ಅವರಿಂದ ಒಕ್ಕಲತನದ ಸುಧಾರಣೆ ಮಾಡಿಸಿದರು. ಈ ರೀತಿಯಿಂದ ಮಲ್ಲಪ್ಪನವರು ಒಕ್ಕಲಿಗರಿಗೆ ಮಾರ್ಗದರ್ಶಕ ರಾಗಿದ್ದರು.

೫ ಮಲ್ಲಪ್ಪನವರಲ್ಲಿ ಪರರಿಗೆ ಉಪಕಾರಮಾಡುವ ದೊಡ್ಡಗುಣವು ಮನೆಮಾಡಿತ್ತು.

೬ ಇವರಿಂದ ಸಹಾಯಪಡೆದವರೆಲ್ಲರು ತಮ್ಮನ್ನು ತಂದೆಯಂತೆ ಸಲಹಿದ ಇವರನ್ನು 'ಅಪ್ಪಾ' ಎಂದು ಕರೆಯುತ್ತಿದ್ದರು. ಆ ಬಂಧು ವಾಚಕ ನಾಮವೇ ಇವರಿಗೆ ಅಂಕಿತನಾಮದಂತೆ ಬಳಿಕೆಯಾಯಿತು.

೭ ಬಹುಜನ ಬಡವಿದ್ಯಾರ್ಥಿಗಳಿಗೆ ಅನ್ನ, ಅರಿವೆ, ಪಾಟಿ, ಪುಸ್ತಕ ಸಹಿತವಾಗಿ ಕೊಟ್ಟರು. ಹೆಚ್ಚಿನತರಗತಿಯ ಶಿಕ್ಷಣ ಹೊಂದಲು ಅಭಿಲಾಷೆಯ ವಿದ್ಯಾರ್ಥಿಗಳಿಗೆ ಹಣಸಹಾಯವನ್ನೂ ಮಾಡಿದರು. ಅದರಿಂದ ಇವರ ವಿದ್ಯಾಭಿರುಚಿಯು ಕಂಡುಬರುತ್ತಿದೆ.

೮ ವಿದ್ಯೆಗಾಗಿ ಹಂಬಲಿಸಿ ಹಣದ ಅನುಕೂಲತೆಯಿಲ್ಲದ ಬಡ ವಿದ್ಯಾರ್ಥಿಗಳಿಗೆ ಮುಖ್ಯವಾಗಿ ಇದರಿಂದ ಸಹಾಯವಾಗುತ್ತಿತ್ತು.

೯ ೧ ಸೊಲ್ಲಾಪುರದಲ್ಲಿ **ಹಲವು** ಶಿವಭಕ್ತರ ಮನೆಗಳಿವೆ.
೨ ಮಲ್ಲಪ್ಪನವರು **ಬಸವೇಶ್ವರರ** ಪರಮಭಕ್ತರು.
೩ ಒಕ್ಕಲುತನದಲ್ಲಿ ಮಲ್ಲಪ್ಪನವರಿಗೆ ಬಲು **ಆಸಕ್ತಿ**.
೪ ಸಾಮಾಜಿಕ ಕಾರ್ಯಗಳಿಗಂತೂ ಇವರದು **ಎತ್ತಿದ ಕೈ**.
೫ ಮಲ್ಲಪ್ಪನವರಿಗೆ **ಅಪ್ಪಾಸಾಹೇಬ** ಎಂಬದು ಅನ್ವರ್ಥಕ ನಾಮವಾಯಿತು.

ವಿರುದ್ಧಾರ್ಥಕ ಶಬ್ದಗಳು

| | |
|---|---|
| ಸತ್ಯ=ಅಸತ್ಯ | ಬಡತನ=ದೈವುಳ್ಳತನ |
| ನ್ಯಾಯ=ಅನ್ಯಾಯ | ಕಹಿ=ಸೀ |
| ಪ್ರಾಮಾಣಿಕ=ಅಪ್ರಾಮಾಣಿಕ | |

ಶಬ್ದಗಳ ಅರ್ಥಗಳು

| | |
|---|---|
| ಎತ್ತಿದಕೈ=ಉದಾರ | ಮಣ್ಣಿಗೆಸರಿ=ಕೀಳು |

# ೬. ನನ್ನ ಸಲುವಾಗಿ ಯಾರೂ ದುಡಿಯುವದಿಲ್ಲ

ಒಂದೇ ಕೈಯಿಂದ ಚಪ್ಪಾಳೆಯಾಗುವದಿಲ್ಲ. ಒಬ್ಬನಿಂದಲೇ ಸಂಸಾರ ಸಾಗುವದಿಲ್ಲ. ಅಡಿಗಡಿಗೆ ಅನ್ಯೋನ್ಯಸಹಾಯ ಬೇಕಾಗುತ್ತದೆ. ಇದನ್ನರಿಯದ ಒಬ್ಬ ಕೂಲಿಯಾಕೆಯು 'ನನ್ನ ಸಲುವಾಗಿ ಯಾರೂ ದುಡಿಯುವದಿಲ್ಲ' ಎಂದು ನಿಟ್ಟುಸಿರುಬಿಟ್ಟು ಮಾತನಾಡಿದಳು. ಆದಕ್ಕೆ ಆಕೆಯ ಗುರುತಿನ ಅನುಭವಿಕ ಮನುಷ್ಯನೊಬ್ಬನು ಆಕೆಯ ತಲೆಯಲ್ಲಿ ತುಂಬಿದ ಆ ವಿಚಾರವನ್ನು ತೆಗೆದು ಹಾಕಿ–'ಈ ಜಗತ್ತಿನಲ್ಲಿ ಎಲ್ಲರೂ ಒಂದಿಲ್ಲೊಂದು ಬಗೆಯಿಂದ ಪರರಿಗಾಗಿ ಶ್ರಮಪಡುತ್ತಲೇ ಇರುವರು' ಎಂಬ ಮಾತನ್ನು ಆಕೆಗೆ ತಿಳಿಹೇಳಿದ ಸಂಗತಿಯು ಈ ಪಾಠದಲ್ಲಿ ಬರೆದಿದೆ.

### ಶಬ್ದಗಳ ಪರಿಚಯ

ಮೂರೂಸಂಜೆ=ಸೂರ್ಯಾಸ್ತಕಾಲ
ಆಕಸ್ಮಾತ್ತಾಗಿ=ಒಮ್ಮಿಂದೊಮ್ಮೆ
ಪೈರು=ಬೆಳೆಸು
ಪ್ರತಿನಿತ್ಯ=ದರದಿವಸ
ಅಡಕಲು=ಒಂದರಮೇಲೊಂದು ಸಾಮಾನು ಇಟ್ಟದ್ದು
ದೋಷವಿಡುವದು=ತಪ್ಪುಹೆಚ್ಚುವದು

### ಅಭ್ಯಸನಗಳಿಗೆ ಉತ್ತರ

೧ ನಾನು ದಿನಾಲು ಅನ್ಯರ ಸಲುವಾಗಿ ದುಡಿದು ಶ್ರಮಬಡುತ್ತೇನೆ. ಆದರೆ ನನ್ನ ಸಲುವಾಗಿ ಮಾತ್ರ ಯಾರೂ ದುಡಿಯುವದಿಲ್ಲ. ದೇವಾ, ಇದು ನಿನ್ನ ನ್ಯಾಯವೇನು ? ಎಂದು ತಾನೊಬ್ಬಳೇ ಕುಳಿತು ಮಾತಾಡಹತ್ತಿ ನಿಟ್ಟುಸಿರು ಬಿಟ್ಟಳು.

೨ ಆಕೆಯ ಮಾತುಗಳನ್ನು ಸಹಜವಾಗಿ ಕೇಳಿದ ಆಕೆಯ ಗುರುತಿನವನು ಆಕೆಯು ಉಪಯೋಗಿಸುವ ಎಲ್ಲ ವಸ್ತುಗಳನ್ನು ತೋರಿಸಿ ಮಾತನಾಡಿದ್ದು ತಪ್ಪು ಎಂದು ಆಕೆಗೆ ತಿಳಿಯುವಂತೆ ಸಿದ್ಧಮಾಡಿ ತೋರಿಸಿದನು. ಇದರಿಂದ ಆಕೆಗೆ ತನ್ನ ಮಾತು ತಪ್ಪೆಂದು ಮನವರಿಕೆಯಾಯಿತು

# ೭. ಸರೋಜಿನಿ ನಾಯುಡು

ಒಂದಾನೊಂದು ಕಾಲದಲ್ಲಿ ಹೆಣ್ಣುಮಕ್ಕಳಿಗೆ ವಿದ್ಯೆಕಲಿಸಬಾರದೆಂಬ

ದುರಾಗ್ರಹವು ಜನತೆಯಲ್ಲಿ ವ್ಯಾಪಿಸಿದ್ದಾಗ ಸ್ತ್ರೀ ಸಮಾಜವು ಕೇವಲ ಗುಲಾಮರಂತಾಗಿ ಜೀವನ ಸಾಗಿಸುತ್ತಿತ್ತು. ಬರಬರುತ್ತ ಆಗಿನ ಸ್ಥಿತಿಯಲ್ಲಿ ವ್ಯತ್ಯಸ್ತವಾಗಹತ್ತಿ ಇಂದು ನಮ್ಮ ದೇಶದಲ್ಲಿ ಪುರುಷರೊಡನೆ ಸ್ತ್ರೀಯರೂ ವಿದ್ಯಾವಂತರಾಗಿ ಸಮಾಜಕ್ಕೆ ಭೂಷಣಪ್ರಾಯರಾಗಹತ್ತಿರುವರು. ಇಷ್ಟೇ ಅಲ್ಲ, ಎಷ್ಟೋ ಸ್ತ್ರೀಯರು ಪುರುಷರಿಗಿಂತ ಮಿಗಿಲಾದ ಖ್ಯಾತಿಯುಳ್ಳವರಾಗಿ ತೋರಹತ್ತಿರುವದು ದೇಶದ ಸುಚಿಹ್ನವೆಂದೇ ಹೇಳಬಹುದು. ಈ ಪ್ರಕಾರ ಪ್ರಸಿದ್ಧಿಪಡೆದು ಸ್ವಾತಂತ್ರ್ಯ ಪಡೆದ ಹಿಂದದೇಶದಲ್ಲಿ 'ಗವ್ಹರ್ನರ' ಎಂಬ ಉಚ್ಚ ಅಧಿಕಾರದಿಂದ ಆಡಳಿತೆ ಸಾಗಿಸಿ ಕೀರ್ತಿಶೇಷಳಾದ ಶ್ರೀಮತಿ ಸರೋಜಿನಿ ನಾಯಡು ಇವರೊಬ್ಬರು. ಈ ಭಾರತ ಮಹಿಳೆಯ ಸಂಕ್ಷಿಪ್ತ ಚರಿತ್ರೆಯು ಈ ಪಾಠದಲ್ಲಿ ವಿವರಿಸಲ್ಪಟ್ಟಿದೆ.

## ಶಬ್ದಾರ್ಥ ಪರಿಚಯ

ಕವಿಯಿತ್ರಿ=ಕವನಗಳನ್ನು ರಚಿಸುವಾಕೆ
ದಂಪತಿಗಳು ಗಂಡಹೆಂಡಿರು
ಅರಿವಾಯಿತು=ತಿಳಿವಳಿಕೆಯಾಯಿತು
ಚಟವು=ರೂಢಿ, ಅಭ್ಯಾಸ
ಪ್ರಭುತ್ವ=ಒಡೆತನ
ಸಾಹಿತ್ಯ=ಭಾಷಾಶಾಸ್ತ್ರ
ಮಹಾಪೂರ=ನೆರೆಹಾವಳಿ
ನಿರಾಶ್ರಿತ=ಆಸರತಪ್ಪಿದ
ನಿವಾರಣೆ=ದೂರೀಕರಿಸು
ಗವ್ಹರ್ನರ=ರಾಜ್ಯಪಾಲ
ಲೇಖಕ=ಬರೆಹಗಾರ
ಅಧ್ಯಕ್ಷಿಣಿ=ಸಮಾಜ ಅಥವಾ ಸಭೆಯ ಒಡತಿ
ವಿದೇಶೀಯ=ಪರದೇಶದ
ಅಮರವು= ಚಿರಕಾಲವಿರುವಂಥವು

## ಅಭ್ಯಸನಗಳಿಗೆ ಉತ್ತರ

೧ ಅಘೋರನಾಥರು ಮಗಳಿಗೆ ಗಣಿತ ವಿಷಯದ ಅಭ್ಯಾಸ ಮಾಡಿಸಬೇಕೆಂಬ ಬಯಕೆಯುಳ್ಳವರಾಗಿದ್ದರು.

೨ ಇವಳು ಹದಿನಾಲ್ಕನೆಯ ವಯಸ್ಸಿನಲ್ಲಿಯ ಇಂಗ್ಲಿಷಿನಲ್ಲಿ ಕಾದಂಬರಿಯೊಂದನ್ನು ಬರೆದಳು. ಆದರಿಂದ ಇವಳಲ್ಲಿ ಕವಿತ್ವ ಶಕ್ತಿಯು ಬಾಲ್ಯದಲ್ಲಿಯೇ ಬೆಳೆದಿತ್ತೆಂಬುದು ವ್ಯಕ್ತವಾಗುವದು.

೩ ಇಂಗ್ಲಿಷ ಭಾಷೆಯ ಅಭ್ಯಾಸದಿಂದ ಆ ಭಾಷೆಯಲ್ಲಿ ಪಂಡಿತಳಾಗಿದ್ದಳು.

೪ ಹೈದರಾಬಾದವು ಮುಸಿ ಹೊಳೆಗೆ ಮಹಾಪೂರ ಬಂದು ಬಹಳ ಹಾನಿಗೊಳಗಾಯಿತು; ಬಹು ಜನರು ನಿರಾಶ್ರಿತರಾದರು. ಅವರಿಗೆ ಅನ್ನ, ವಸ್ತ್ರ, ಇರಲು ಸ್ಥಾನಗಳನ್ನು ಸರೋಜಿನಿದೇವಿಯು ಪರಿಶ್ರಮದಿಂದ ಒದಗಿಸಿಕೊಟ್ಟು 'ದೀನ ಬಂಧು'ವೆಂದು ಹೊಗಳಿಸಿಕೊಂಡಳು.

೫ ಈಕೆಯ ದೇಶಾಭಿಮಾನವು ಉಜ್ವಲವಾದದ್ದಿತ್ತು; ದೇಶಹಿತಕ್ಕಾಗಿ ದುಡಿದಳು, ಸೆರೆಮನೆಗೆ ಸಾಗಿದಳು, ಬಳ್ಳಿ ಕಷ್ಟ-ನಷ್ಟ ಅನುಭವಿಸಿದಳು. ಇದರಿಂದ ಈಕೆಯು ರಾಷ್ಟ್ರಸೇವಿಕೆಯೆಂದು ಹೆಸರಾದಳು

ಸರೋಜಿನಿದೇವಿಯು ಸಂಯುಕ್ತಪ್ರಾಂತದ ಗವ್ಹರ್ನರ ಅಧಿಕಾರ ಪಡೆದಿದ್ದಳು.

ಆಕೆಯಲ್ಲಿ ಕಾವ್ಯ ಪ್ರತಿಭೆಯಿತ್ತು; ಕವಿತೆಗಳನ್ನು ಸರಸವಾಗಿ ರಚಿಸುತ್ತಿದ್ದಳು. ಅವು ಮಧುರ ಧ್ವನಿಯಿಂದ ಹಾಡಲು ಬರುವಂಥ ಸುಂದರವಾಗಿದ್ದವು. ಆದುದರಿಂದ ಈಕೆಗೆ ಭಾರತದ ಕೋಕಿಲೆ ಎಂದು ಹೆಸರು ಪ್ರಾಪ್ತವಾಗಿತ್ತು.

೬ (ಅ) ಒಮ್ಮೆ ಮುಸಿನದಿಗೆ ಮಹಾಪೂರ ಬಂದಾಗ ಬಡಜನರ ಮನೆ ಮಠಗಳೆಲ್ಲ **ಬಿದ್ದು ನೀರುಪಾಲಾದವು.**

(ಆ) ನಿರಾಶ್ರಿತರು ಸರೋಜಿನಿಯನ್ನು ತಮ್ಮ **ಭಾಗ್ಯದೇವತೆ** ಯೆಂದು ಕರೆದರು.

(ಇ) ಈಕೆಯ ಸೇವೆಗೆ ಮೆಚ್ಚಿ ಸರಕಾರದವರು **ಕೈಸರ ಇ ಹಿಂದ** ಎಂಬ ಸುವರ್ಣಪದಕವನ್ನು ಕೊಟ್ಟರು.

(ಈ) ಸರೋಜಿನಿಗೆ **ಭಾರತದ ಕೋಕಿಲೆ** ಎಂಬ ಹೆಸರು ಪ್ರಾಪ್ತವಾಯಿತು.

೯ ಕಾವ್ಯಮಾಡುವವನು **ಕವಿ**; ಕಾವ್ಯಮಾಡುವವಳು **ಕವಿಯಿತ್ರಿ**. ಗೌಡಿಕೆಮಾಡುವವ **ಗೌಡ**; ಗೌಡನ ಹೆಂಡಿತಿ **ಗೌಡಶಾನಿ**. ಗೋಗಳ ರಕ್ಷಕನು **ಗೌಳಿಗ**; ಹಾಲುಮಾರುವವಳು **ಗೌಳಗಿತ್ತಿ**. ಹೊಲದಲ್ಲಿ ಹೂಡುವದು **ಕೋಣ**; ಹೈನವನ್ನು ಕೊಡುವದು **ಎಮ್ಮೆ**.

# ೮. ಬಣ್ಣದ ಚುಕ್ಕಿ

ಕವಿಯು ಸೊಬಗಿನ ಹಕ್ಕಿಯು ಸಹವಾಸ ಬಯಿಸಿ ಅದನ್ನು ಹಲವು ತೆರದಿಂದ ಒಪ್ಪು ಇಟ್ಟು ಕರೆದಂತೆ ಇದರಲ್ಲಿ ವರ್ಣಿತವಾಗಿದೆ.

## ಸರಳ ಅರ್ಥ

ಎಲೆ ಹಾರುವ ಹಕ್ಕೀ ಬಾ! ಬಣ್ಣದ ತಾರೆಯೇ ಬಾ. ನನ್ನ ಗೆಳೆಯರು ಆಡಲಿಕ್ಕೆ ಯಾರೂ ಇಲ್ಲ, ವೇಳೆ ಹೋಗಲೊಲ್ಲದು ಬಾ. ನಿನ್ನಂತೆ ನನಗೂ ಹಾಡಲಿಕ್ಕೂ ಹಾರಾಡಲಿಕ್ಕೂ ಕಲಿಸು. ಬಾ. ಹೂವಿನ ಮಧುರಸವನ್ನೂ, ಸುಗ್ಗೀಕಾಲದ ಕಾಳುಗಳನ್ನೂ ನಿನಗೆ ಕೊಡುವೆ ಬಾ. ಮುಂಜಾವಿನಿಂದ ಸಂಜೆಯುವರೆಗೆ ಆಡೋಣ ಬಾ. ಸಂಜೆಯು ಪಶ್ಚಿಮದಿಕ್ಕಿನ ಸೂರ್ಯನು ಮುಳುಗುವದರಿಂದ ಮುದ್ದಿಡುವ ನನ್ನ ತಾಯಿಯು ನೆನಪು ನನ್ನನ್ನು ಮನೆಯು ಕಡೆಗೆ ಜಗ್ಗಹತ್ತಿದೆ. ಅಡವಿಯಲ್ಲಿ ನಿನ್ನನ್ನು ಹಡೆದ ನಿನ್ನ ತಾಯಿಯು ಗುಟುಕು ನಿನ್ನನ್ನು ಗೂಡಿಗೆ ಸೆಳೆಯುತ್ತಿದೆ. ಅದುವರೆಗೆ ನಾವಿಬ್ಬರು ಇಲ್ಲಿ ಆಡೋಣ, ಹಾಡೋಣ ಬಾ. ಈ ವನದಲ್ಲಿ ಇಬ್ಬರೂ ತಿರುಗಾಡಿ ಹಣ್ಣು ತಿಂದು ಚಿಗುರ ಸೊಬಗು ಕಂಡು, ಸರೋವರದ ನೀರು ಕುಡಿದು ನಳನಳಿಸುವ ಹಸರು ಹುಲ್ಲಮೇಲೆ ಹೊರಳಾಡಿ ಆಡೋಣ ಬಾ. ಅದುವರೆಗೆ ಆಡಿ ಹಾಡೋಣ. ಬಾ ಬಾರೆಲೆ ಹಕ್ಕಿ! ಬಣ್ಣದ ಚುಕ್ಕಿ ಬಾ.

## ಶಬ್ದಾರ್ಥ ಪರಿಚಯ

ಚುಕ್ಕಿ=ನಕ್ಷತ್ರ
ಕಾಲ=ವೇಳೆ
ಸುರಿವೆನು=ಉದುರಿಸುವೆನು
ಬೈಗಿನಹೊತ್ತು=ಮುಚ್ಚಂಜೆ
ಹೆತ್ತು=ಹಡೆದು
ಸೆಳೆಯುವದು=ಜಗ್ಗುವದು
ತಳಿರಿನ ಸೊಬಗು=ಚಿಗುರಿನ ರಂಗ
ನಲಿಯುವ=ಸಂತೋಷಪಡುವ

## ಅಭ್ಯಸನಗಳಿಗೆ ಉತ್ತರ

೧ ತನ್ನ ಕೂಡ ಆಡುವದಕ್ಕೆಂದು ಹಕ್ಕಿಯನ್ನು ಕರೆಯುವನು.

೨ ಹಕ್ಕಿಗೆ-ಮಕರಂದ, ಸುಗ್ಗಿಯಕಾಳು, ಕೊಡುವೆನೆಂದು ಹೇಳಿದ.

೩ ನನ್ನ ತಾಯಿಯು ಮುದ್ದುಕೊಡಲು ನನ್ನನ್ನು ಒದರುವವರೆಗೆ ನಿನ್ನ ತಾಯಿಯು ನಿನಗೆ ಗುಟುಕುಕೊಡಲು ಕರೆಯುವವರೆಗೆ ಅಂದರೆ ಸಂಜೆಯವರೆಗೆ ಆಡೋಣ ಬಾ ಎಂದು ಕರೆದನು.

೪ ತೋಟ ತೋಟಗಳಲ್ಲಿ ತಿರುಗಾಡುತ್ತ ಹಣ್ಣು ತಿನ್ನುತ್ತ ಚಿಗುರಿನ ರುಚಿನೋಡುತ್ತ, ತಣ್ಣೀರು ಕುಡಿಯುತ್ತ, ಮೃದು ಹುಲ್ಲಮೇಲೆ ಉರುಳಾಡುತ್ತ ಬೀಳುತ್ತ ಏಳುತ್ತ ಸಂಜೆಯವರೆಗೆ ಆಡುವಾ, ನಲಿಯುವಾ ಬಾ ಎಂದು ಹೇಳಿದೆ.

೫ ಕವಿಗೆ ಸೃಷ್ಟಿಯ ಸೌಂದರ್ಯದ ಸೊಬಗನ್ನು ಸವಿಯುವ ಪ್ರೀತಿಯುಂಟು ಎಂದು ತೋರುವದು.

೬ ಆಕಾಶದ ತಾರೆಗಳು, ಹಾರುವಹಕ್ಕಿಗಳು, ಅದಲುಬದಲಾಗುವ ಕಾಲ, ವನಗಳಸೊಬಗು, ಇವೆಲ್ಲವುಗಳಲ್ಲಿ ಆತನ ಪ್ರೀತಿ.

೭ ಈ ಕವಿತೆಯಿಂದ ಹೃದಯದ ಭಾವನೆಯು ಸೊಗಸಾಗಿ ಮಿಡಿಯುವದರಿಂದ ಈ ಕವಿತೆಯನ್ನು ಮೆಚ್ಚುತ್ತೇವೆ.

೮ ಪಡುವಣದೆಸೆ=ಸೂರ್ಯ ಮುಳುಗುವ ದಿಕ್ಕು
ತಿಳಿಗೊಳ=ಸ್ವಚ್ಛನೀರಿನ ಸರೋವರ
ಕಾಡಿನಬಳಿಯಲಿ=ಅಡವಿಯಲ್ಲಿ
ಬೈಗಿನಹೊತ್ತು=ಮುಚ್ಚಂಜೆ
ಪೊರೆದತಾಯಿ=ರಕ್ಷಿಸತಾಯಿ
ಮನೆಯೆಡೆಗೆ=ಮನೆಗೆ

೯ ತಣ್ಣೀರು ಇದರ ವಿರುದ್ಧಾರ್ಥಕ ಶಬ್ದ ಬಿಸಿನೀರು (ಬೆನ್ನೀರ್)
ಪಡುವಣ ,, ,, ಮೂಡಣ
ಬಾ ,, ,, ಹೋಗು
ಮೇಲೆಹಾರು ,, ,, ಕೆಳಗೆ ಜಿಗಿ

# ೯. ಪ್ರತಾಪಸಿಂಹನ ಪ್ರತಿಜ್ಞೆ

ಇವನೊಬ್ಬ ಇತಿಹಾಸ ಪ್ರಸಿದ್ಧ ಪರಾಕ್ರಮಿ ಪುರುಷ, ಕೈಕೊಂಡ ಕಾರ್ಯ ಕೊನೆಗಾಣಿಸುವ ದೃಢಪ್ರತಿಜ್ಞೆಯುಳ್ಳವ. ಅದರಿಂದ ಎಂದೂ ಹೊರ

ಾಡದವ. ತನ್ನ ಮನೆತನದ, ತನ್ನ ನಾಡಿನ, ತನ್ನ ಧರ್ಮದ ಅಭಿಮಾನಕ್ಕೆ ಕಿಂಚಿತ್ತಾದರೂ ಕಲಂಕ ತಾಗಿಸದೆ ರಕ್ಷಿಸಿ, ಕೀರ್ತಿವಂತನಾಗಿ ಬೆಳಗಿದ ಈತನ ಚರಿತ್ರೆಯು ಈ ಪಾಠದಲ್ಲಿದೆ.

## ಶಬ್ದ ಪರಿಚಯ

ಮಹಾವೀರ=ಬಲುಶೂರ

ಹೆಜ್ಜೆಯಲ್ಲಿ ಹೆಜ್ಜೆ=ನಡೆದುಬಂದ ಪದ್ಧತಿ

ಕಲಂಕ=ದೋಷ

ತಲೆತಗ್ಗಿಸಲಿಲ್ಲ=ಶರಣು ಹೋಗ

ಒಗ್ಗಲಿಲ್ಲ=ಕೂಡಿಬರಲಿಲ್ಲ

ಸ್ವಾಭಿಮಾನ=ತಾನೆಂಬ ಗೌರವ

ದೃಢಸಂಕಲ್ಪ=ಹೊಯ್ದಾಡದಂಥ ಮನದ ನಿಶ್ಚಯ

ಪರಿವಾರ=ತನ್ನನ್ನು ಅವಲಂಬಿಸಿದವರು

ಪರಿತಾಪ=ಬಹುಕಷ್ಟ

ಜೀವನ=ಬದುಕುವಿಕೆ

ಕಷ್ಟವನ್ನು ಸಹಿಸು=ಕಷ್ಟತಾಳು

ಹಲುಬಿ=ಅತ್ತು, ಒದರಿ

ಎಣ್ಣೆಯಿಲ್ಲ=ಲೆಕ್ಕವಿಲ್ಲ

ಪ್ರತಿಜ್ಞೆ=ಆಣೆ

ಮಂತ್ರಿ=ಪ್ರಧಾನಿ

## ಅಭ್ಯಸನಗಳಿಗೆ ಉತ್ತರ

೧ ತಾನು ಯುದ್ಧದಲ್ಲಿ ಸೋತರೂ ತನ್ನ ಅಭಿಮಾನ ರಕ್ಷಣೆಗಾಗಿ ಅಡವೀ ಸೇರಿದನು. ಮಾತ್ರ ವೈರಿಗಳಿಗೆ ಅಂಜಿ ಅಲ್ಲ.

೨ ಹಲಜನ ರಜಪೂತರಾಜರ ಸಹಾಯ, ಮಂತ್ರಿಯ ಧನಸಹಾಯ, ತನ್ನ ಉತ್ಸಾಹ ಇವುಗಳಿಂದ ರಾಜ್ಯದ ಬಹುಭಾಗ ಗೆದ್ದನು.

೩ ಧೈರ್ಯ, ಸ್ವದೇಶಪ್ರೀತಿ, ಸ್ವಾಭಿಮಾನ, ಶೂರತ್ವ, ಕಷ್ಟಸಹಿಷ್ಣುತೆ, ದೃಢನಿಶ್ಚಯ, ಇವೆಲ್ಲ ಗುಣಗಳು ಅವನಲ್ಲಿದ್ದವು.

೪ (೧) ನಮ್ಮ ಸಂಸ್ಕೃತಿಗೆ ಸುಸ್ವರೂಪವನ್ನು ಕೊಡುವವನನ್ನು **ಹೆಜ್ಜೆಯಲ್ಲಿ ಹೆಜ್ಜೆಯನ್ನಿಟ್ಟು** ಅನುಸರಿಸುವದು

(೨) ಸನ್ಯಾಸದೀಕ್ಷೆಪಡೆದವನಿಗೆ ಹೆಂಡಿರು ಮಕ್ಕಳ **ಹವ್ಯಾಸವೇ?**

(೩) ನಮಗೊದಗುವ ತಾಪ, **ಪರಿತಾಪ** ಸಂತಾಪಗಳು ನಮ್ಮ ಪಾಪಕರ್ಮದ ಮೂಲಕವಾಗಿಯೇ ಜನಿಸುವವು.

೪ ಮೋಹವೆಂಬ ಕೆಂಡದಿಂದ ಸಿಡಿದ ಮಮತೆಯ ಕಿಡಿಗಳು ಅನರ್ಥಕಾರಿಗಳು.

## ೧೦. ಜಾಣ ನರಿ

ಜಗತ್ತಿನ ಜನರೆಲ್ಲರು ಒಂದೆ ತರಹದ ಸ್ವಭಾವದವರಾಗಿಲ್ಲ. ಕೆಲವರು ಉತ್ತಮರು, ಹಲವರು ಮಧ್ಯಮರು, ನೀಚರನೇಕರು. ಆದರೆ ಪ್ರತಿಯೊಬ್ಬನಿಗೆ ಎಲ್ಲ ವರ್ಗದವರೊಡನೆ ಒಮ್ಮಿಲ್ಲೊಮ್ಮೆ ವ್ಯವಹರಿಸುವ ಪ್ರಸಂಗ ಬಂದೇ ಬರುತ್ತದೆ. ಆಗ ಮಾತ್ರ ಅವರವರ ಸುಗುಣ-ದುರ್ಗುಣ, ವಿಶ್ವಾಸ-ವಂಚನೆ, ಸುಷ್ಟತೆ–ದುಷ್ಟತೆಗಳು ಅನುಭವಕ್ಕೆ ಬರುವವು. ಅವನ್ನರಿತುಕೊಂಡು ಮನುಷ್ಯನು ತಾನು ಗಂಡಾಂತರಕ್ಕೊಳಗಾಗದೆ ಇನ್ನೊಬ್ಬರನ್ನು ಸಿಕ್ಕಿಸದೆ ಪಾರಾಗುವವನೇ ಜಾಣನು. ಗಂಡಾಂತರಕ್ಕೆ ಬಿದ್ದವನು ಮರುಳನು. ಈ ಪಾಠದಲ್ಲಿ ಜಾಣನರಿಯೊಂದು ಮರುಳ ಬ್ರಾಹ್ಮಣನನ್ನು ಹುಲಿಯ ದವಡೆಯೊಳಗಿಂದ ಉಳಿಸಿದ ಕಥೆಯು ಬರೆದಿದೆ.

### ಶಬ್ದಾರ್ಥ ಪರಿಚಯ

| | |
|---|---|
| ಕಂಟಕಪ್ರಾಯ=ಮುಳ್ಳಿನೋಪಾದಿ | ಹಿಂಗಿಸಲಿಕ್ಕೆ =ಕಳಕೊಳ್ಳಲಿಕ್ಕೆ |
| ಹೊಂಚುಹಾಕಿ=ಜಪ್ಪಿಸಿ | ಹೀರುವೆನು=ಜಗ್ಗುವೆನು |
| ಆರ್ತಧ್ವನಿ=ಕಷ್ಟದಿಂದ ಉಚ್ಚರಿಸಿದ ಧ್ವನಿ | ಪ್ರಭುಗಳು=ಯಜಮಾನರು |
| ದೇವರಸಾಕ್ಷಿ=ದೇವರ ಆಣೆ | ಠಕ್ಕ=ಮೋಸಗಾರ |
| ಪುಣ್ಯವಂತ=ಪುಣ್ಯಗಳಿಸಿದವ | ಯೋಗ್ಯಸ್ಥಳ=ಸರಿಯಾದಸ್ಥಾನ |
| ದೀನ ದೆಶೆ=ಕಂಗಾಲಸ್ಥಿತಿ | ನಂಬಬೇಡ=ವಿಶ್ವಾಸವಿಡಬೇಡ |

### ಅಭ್ಯಸನಗಳಿಗೆ ಉತ್ತರ

೧ ತಾನು ಸಿಕ್ಕುಬಿದ್ದ ಬಲೆಯ ಬಾಯನ್ನು ಅವನಿಂದ ತೆರೆಯಿಸಲು ಹಾದು ಹೋಗುವ ಹಾರುವನನ್ನು ಹುಲಿಯು ಕರೆಯಿತು.

೨ ಹುಲಿಯ ನಮ್ರತೆಯ ನುಡಿಗಳು, ಅದರ ಧರ್ಮಬೋಧಕಮಾತುಗಳು, ಬ್ರಾಹ್ಮಣನನ್ನು ಕೊಂಡಾಡುವ ವಾಕ್ಯಗಳು ಇವೆಲ್ಲವುಗಳಿಂದ ಬ್ರಾಹ್ಮಣನಲ್ಲಿ ನಂಬುಗೆ ಹುಟ್ಟಿತು.

೩ ಬಾಗಿಲ ತೆರೆದಕೂಡಲೆ ಹುಲಿಯು ಬ್ರಾಹ್ಮಣನಮೇಲೆ ಜಿಗಿಯಲು ಹೋಯಿತು.

೪ 'ದಯಮಾಡಿ ನನ್ನನ್ನು ಬಿಡು. ನನ್ನ ಪ್ರಾಣ ಉಳಿಸು' ಎಂದು ಬ್ರಾಹ್ಮಣನು ಬೇಡಿಕೊಂಡನು.

# ೧೧. ಬಸವೇಶ್ವರ

ಈ ಪಾಠದಲ್ಲಿ ಬಾಗೇವಾಡಿಯ ಬಸವೇಶ್ವರರ ಚರಿತ್ರೆಯಿದೆ. ಅವರು ಒಂದು ದೊಡ್ಡ ಸಮಾಜದ ಸುಧಾರಕರು. ಕಲಚೂರಿ ಮನೆತನದ ಅರಸು ಬಿಜ್ಜಳನ ಮಂತ್ರಿಯಾಗಿದ್ದರು. ಸತ್ಯ, ನ್ಯಾಯ, ಅಹಿಂಸೆಗಳು ಅವರ ಬೋಧನೆಯ ತತ್ವಗಳು; ಈ ತತ್ವಗಳನ್ನೇ ವಚನಗಳಲ್ಲಿ ಅಡಕಿಸಿ ಜನರಿಗೆ ಉಪದೇಶಮಾಡಿದರು. ಅದರ ಪರಿಣಾಮವಾಗಿ ಅವರ ಅನುಯಾಯಿಗಳ ಬೆಳೆಯಿತು. ಬಸವೇಶ್ವರ ಮಂತ್ರಿಯಮೇಲೆ ಬಿಜ್ಜಳನಿಗಿಂತಲೂ ಜನತೆಯ ಪ್ರೀತಿವಿಶ್ವಾಸಗಳು ಬೆಳೆದವು. ಇದರಿಂದ ಬಸವೇಶ್ವರರಗೂಡ ಅರಸನ ದ್ವೇಷ ಸುರುವಾಯಿತು. ಕಡೆಗೆ ಬಸವೇಶ್ವರರು ರಾಜನ ಕೋಪದಿಂದ ದೂರಾಗಿ ಮಂತ್ರಿಪದವನ್ನು ಬಿಟ್ಟುಗೊಟ್ಟು ಕಪ್ಪಡಿಸಂಗಮದಲ್ಲಿ ಐಕ್ಯ ಹೊಂದಿದರು.

## ಶಬ್ದ ಪರಿಚಯ

ಧಾರ್ಮಿಕರು=ಧರ್ಮನಿಷ್ಠೆಯುಳ್ಳವರು
ಸಾಹಿತಿಗಳು=ಭಾಷಾಭಿಜ್ಞರು
ಜೀವನದ ರಂಗ=ಸಂಸಾರ ಕ್ಷೇತ್ರ
ಅದ್ವಿತೀಯ=ಶ್ರೇಷ್ಠ
ವೃಷಭ=ಎತ್ತು (ಬಸವ)
ಸಂಗಮ=ಕೂಡುವಿಕೆ
ಆಚರಣೆ=ನಡಾವಳಿ
ಸಂಪ್ರದಾಯ=ಪದ್ಧತಿ (ರೀತಿ)
ದೃಷ್ಟಿ=ನೋಟ
ಅಂಗಹೀನ=ಅವಯವ ರಹಿತ
ಬೇದಭಾವ=ಭಿನ್ನತೆ
ಬೋಧಪ್ರದ=ಅರಿವು ಹುಟ್ಟಿಸುವ

## ಅಭ್ಯಸನಗಳಿಗೆ ಉತ್ತರ

೧ ಬಸವೇಶ್ವರನ ತಾಯಿತಂದೆಗಳು ನಂದಿಯ ವ್ರತದಿಂದ ಪುತ್ರನನ್ನು ಪಡೆದು ಮಗನಿಗೆ 'ವೃಷಭೇಶ್ವರ' ಎಂದು ಹೆಸರಿಟ್ಟರು. ಅದೇ 'ಬಸವೇಶ್ವರ.'

೨ ಕೂಡಲ ಸಂಗಮ ದೇವಾಲಯಕ್ಕೆ ಹೋದನು.

೩ ಬಸವೇಶ್ವರನ ಚುರುಕುಬುದ್ಧಿ, ಹಾಗು ಬಲದೇವನ ಅಳಿಯ ಈ ಮೂಲಕವಾಗಿ ಬಸವನಿಗೇ ಮಂತ್ರಿಪದವನ್ನು ಕೊಟ್ಟನು.

೪ ರಾಜಕಾರಣ ಪಟುತ್ವದಿಂದ, ರಾಜ್ಯಸುಧಾರಣೆಗಳಿಂದ ಹಾಗು ಯಾರೂ ಓದಲಿಕ್ಕಾಗದ ತಾಮ್ರಪಟ ಓದಿ ರಾಜಸಿಂಹಾಸನ ಬುಡದ ನಿಧಿಯ ಶೋಧ ತಿಳಿಸಿದ್ದರಿಂದ ಬಸವೇಶನು ಅರಸನಿಗೆ ಪ್ರಿಯನಾದ.

೫ ಪ್ರಜೆಗಳಿಗೆ ಅವಶ್ಯವಾದ ಸುಧಾರಣೆಗಳಿಂದ ಅವರಿಗೂ ಪ್ರಿಯನಾದ.

೬ 'ಅನುಭವಮಂಟಪ' ಎಂಬ ಸಂಸ್ಥೆ ಸ್ಥಾಪಿಸಿ ದೂರಿನ ಶರಣ ರನ್ನು ಆ ಸಂಸ್ಥೆಗೆ ಸೇರಿಸಿಕೊಂಡ ಅವರೆಲ್ಲರು ಧಾರ್ಮಿಕ ವಿಷಯಗಳ ಮೇಲೆ ವಾದ ವಿವಾದ ಮಾಡುತ್ತಿದ್ದರು. ಈ ಪ್ರಕಾರ ಬಸವೇಶ್ವರರು ಆಗ ಧಾರ್ಮಿಕ ಮಹಾಪುರುಷರಾದರು.

೭ ಸತ್ಯ, ನ್ಯಾಯ, ಅಹಿಂಸೆ ಇವೇ ಇವರ ತತ್ವಗಳು.

೮ ಬಸವನ ತತ್ವಗಳನ್ನು ವಚನರೂಪದಿಂದ, ಶರಣರ ಬೋಧೆಯಿಂದ ಜನರಲ್ಲಿ ಪ್ರಚಾರವಾದವು.

೯ ಬಸವೇಶ್ವರರು ಸತ್ತು ೮೦೦ ವರ್ಷಗಳಾಗಿ ಹೋದರೂ ಅವರ ತತ್ವಗಳು ಮಾನ್ಯವಾಗಿ ಇಂದಿಗೂ ಇವೆ. ಮುಂದೂ ಇರುವವು. ಆದ್ದರಿಂದ ಅವರ ತತ್ವಗಳು ಅಮರ (ಚಿರಂಜೀವ) ವಾಗಿವೆ.

೧೦ (ಅ) ವೇದಾಂತಿಗಳು ಬ್ರಹ್ಮನನ್ನು ಅದ್ವಿತೀಯನೆಂದುಹೇಳುವರು.
ಗಣಪತಿಗೆ ಮೂಷಕ ವಾಹನನೆಂದು ಹೆಸರಿದೆ.
ವೈಷ್ಣವ ಸಂಪ್ರದಾಯದಲ್ಲಿ ತಾರತಮ್ಯವುಂಟು.
ಸಾಧುಗಳ ಸಾನ್ನಿಧ್ಯವು ಸತ್ಸಹವಾಸವಾಗುವದು.
ಸಹಕಾರೀ ಸಂಸ್ಥೆಯಿಂದ ಪತ್ತು ಬೆಳೆಯುತ್ತದೆ.

(ಆ) ೧ ಧರ್ಮವಂತನಾದ ಮನುಷ್ಯನು ಮೊದಲು ದಯಾನ್ವಿತನಾಗಿದ್ದರೇ ಮಾತ್ರ ಧರ್ಮವಂತನೆನಿಸುವನು.

೨ ಕಾಯಕವೆಂದರೆ ಕೆಲಸ ಅಥವಾ ಕರ್ಮ, ಕೈಲಾಸವೆಂದರ ಕೊನೆ (ಫಲ) ಕರ್ಮದಿಂದ ಫಲ ದೊರಕುವದು ನಿಶ್ಚಿತವು.

ಜಗತ್ತಿನಲ್ಲಿ ನೂರಾರು ದೇವತೆಗಳ ಹೆಸರುಗಳನ್ನು ಕೇಳಬಹುದು. ಒಬ್ಬ ದೇವನಿಗೆ ಸಾವಿರಾರು ಹೆಸರು ಗಳನ್ನು ಉಚ್ಚರಿಸುವದುಂಟು. ಎಷ್ಟಾದರೇನು ? 'ದೇವರು' ಈ ಶಬ್ದವೊಂದೇ ಅರ್ಥಾತ್ ದೇವರು ಒಬ್ಬನೇ.

---

# ೧೨. ಸ್ವಾತಂತ್ರ್ಯವೆ ಬೇಕು

(ಕವಿತೆ)

ಜಗತ್ತಿನ ಪ್ರಾಣಿಗಳೆಲ್ಲ ಬಯಸುವಂತಹದು ಸ್ವಾತಂತ್ರ್ಯ. ಆದರೆ ಈ ಸ್ವಾತಂತ್ರ್ಯವು ನಮಗೆ ಏತಕ್ಕೆ ಬೇಕೆಂಬದನ್ನು ಕವಿಯ ವರ್ಣನೆಯು ಈ ಪಾಠದಲ್ಲಿದೆ.

## ಸರಳ ಅರ್ಥ

೧ ಸ್ವಾತಂತ್ರ್ಯವು ಬೇಕು.
ನಮ್ಮ ಹೆಚ್ಚಳಕ್ಕಾಗಿ ಸ್ವಾತಂತ್ರ್ಯ ಬೇಕು"
ಪ್ರವಾಹಕ್ಕೆ ಒಡ್ಡು ಹಾಕಿ ನೀರು ಕಟ್ಟಲು ಪ್ರವಾಹ ಮುಂದೆಸಾಗದು. ಆದರಂತೆ ನಮ್ಮ ಪ್ರಗತಿಯಾಗಲು ಅಡ್ಡಿಮಾಡದ ಸ್ವಾತಂತ್ರ್ಯ ಬೇಕು"

೨ ಪಕ್ಷಿಯನ್ನು ಪಂಜರದಲ್ಲಿ ಹಾಕಿಟ್ಟರೆ ಅದರ ಮಂಜುಳಧ್ವನಿಯು ಕೇಳಬರುವದಿಲ್ಲ. ಅದರಂತೆ ನಮ್ಮ ಹಾಡು ಕವನಗಳಿಗೆ ಸ್ವಾತಂತ್ರ್ಯ ಬೇಕು.

೩ ಸೂರ್ಯನನ್ನು ಮೋಡಮುಸುಕಲು ಅವನು ಕಾಂತಿಹೀನನಾಗುವನು. ಆದರಂತೆ ನಮ್ಮ ಕೀರ್ತಿಬೆಳಗಲು ಸ್ವಾತಂತ್ರ್ಯ ಬೇಕು.

೪ ಹೂವನ್ನು ಮೊಗ್ಗೆ ಇದ್ದಾಗ ಹರಿಯಲು ಸುಗಂಧಬೀರದು. ಆದ ರಂತೆ ನಮ್ಮ ಹೃದಯವರಳಲು ಸ್ವಾತಂತ್ರ್ಯ ಬೇಕು.

೫ ಸ್ವಚ್ಛಂದದಿಂದ ತಿರುಗಾಡುವ ಸಿಂಹನನ್ನು ಬಲೆಯಲ್ಲಿ ಹಾಕಲು ಅದು ಸಿಟ್ಟಾಗಿ ಶಾಂತಿಯನ್ನು ಕಳೆದುಕೊಳ್ಳುವದು. ಆದರಂತೆ ನಮ್ಮ ಶಕ್ತಿಯ ವರ್ಧನೆಗೆ ಸ್ವಾತಂತ್ರ್ಯ ಬೇಕು.

೬ ಆದ್ದರಿಂದ ದೇವಾ! ನಮ್ಮ ಏಳ್ಗೆ ಪ್ರಗತಿ ಮೊದಲಾದವೆಲ್ಲವು ಸ್ವಾತಂತ್ರ್ಯದಲ್ಲಿರುವವು. ಅದಕ್ಕಾಗಿ ನಮಗೆ ಆ ಸ್ವಾತಂತ್ರ್ಯವನ್ನು ದಯ ಪಾಲಿಸಬೇಕು. ದೇಶಕ್ಕೆ ಸ್ವಾತಂತ್ರ್ಯ ಬೇಕು.

### ಶಬ್ದಗಳ ಪರಿಚಯು

ಸ್ವಾತಂತ್ರ್ಯ=ಇನ್ನೊಬ್ಬರ ಅಧೀನ ದಲ್ಲಿ ಇರದೆ ಇರುವದು
ಏಳ್ಗೆ=ಉದ್ಧಾರ
ತಡೆಯನು=ಒಡ್ಡನ್ನು
ಅಕ್ಕರೆಯಿಂದ=ಪ್ರೀತಿಯಿಂದ
ನೇಸರ=ರವಿಯು
ಮುಗಿಲೋಳಿಯು=ಮೋಡಗಳ ಸಾಲು
ಅರೆಯರಳಿದ=ಅರ್ಧ ಅರಳಿದ
ಸುರುಚಿರಪರಿಮಳ=ಒಳ್ಳೆ ಸುಗಂಧ
ಸಿಂಗನ=ಸಿಂಹನನ್ನು
ಕರುಣಿಸುತ=ದಯೆದೋರುತ್ತ

### ಅಭ್ಯಸನಗಳಿಗೆ ಉತ್ತರಗಳು

೧ ಹಳ್ಳಕ್ಕೆ ಒಡ್ಡು ಹಾಕಲು ಪ್ರವಾಹ ಕಟ್ಟಾಗುವದು.
೨ ಹಕ್ಕಿಯು ಮಂಜುಳಗಾನಮಾಡುವದಿಲ್ಲ.
೩ ಮೋಡಮುಸುಕಲು ಸೂರ್ಯನ ಪ್ರಕಾಶ ಕಡಿಮೆಯಾಗುವದು
೪ ಹೂವು ಮೊಗ್ಗೆ ಇದ್ದಾಗ್ಗೆ ಅದಕ್ಕೆ ವಾಸನೆ ಇರುವದಿಲ್ಲ.
ಸಿಟ್ಟಿಗೇಳುವದು. ಶಾಂತವಾಗಿ ಇರಲಾರದು.
ಬೆಂಕಿಯನ್ನು ಮಣ್ಣಿನಿಂದ ಮುಚ್ಚಲು ಅದರ ತೇಜವಡಗುವದು.
ಸರಳ ಅರ್ಥದಲ್ಲಿ ಬರೆದಿದೆ ನೋಡಿರಿ.

## ೧೩. ವೀರ ಅಭಿಮನ್ಯು

ಇದೊಂದು ಭಾರತ ಪುರಾಣದ ಕಥೆ–ಅಭಿಮನ್ಯುವೆಂಬ ಚಿಕ್ಕ ಬಾಲಕನು ದೊಡ್ಡ ಸೈನ್ಯದೊಂದಿಗೆ ಯುದ್ಧಮಾಡಿದನು. ಅವರನ್ನೆಲ್ಲ ದಂಗುಬಡಿಸಿದನು. ಇವನನ್ನು ಸೋಲಿಸಲು ಅಸಮರ್ಥರಾದ ಆ ಸೈನ್ಯದವರು ಅನೀತಿಯಿಂದ ಹಿಂದೆ ಬಂದು ಅಭಿಮನ್ಯುವಿನ ಕೈಗಳನ್ನು ಕತ್ತರಿಸಿದರು. ಒಬ್ಬನೇ ನಿಂತು ಸಾವಿರಾರು ಸೈನ್ಯವನ್ನು ಸದೆದು ಕೊನೆಗೆ ಅಭಿಮನ್ಯುವು ಹತನಾ

ವರೂ 'ವೀರಪುತ್ರ'ನೆಂದು ಅವನ ಹೆಸರು ಚಿರವಾಗಿ ಉಳಿಯಿತು. ಈ ಕಥೆಯೇ ಈ ಪಾಠದಲ್ಲಿ ಹೇಳಿದೆ.

## ಶಬ್ದಾರ್ಥ ಪರಿಚಯ

ಪಾಂಡವರ ಪಕ್ಷ = ಪಾಂಡವರಬಣ
ಲಕ್ಷಾವಧಿ = ಲಕ್ಷಗಟ್ಲೆ
ಸಲಹೆಗಾರ = ಯುಕ್ತಿ ಮಸಲತ್ತು ಹೇಳುವವ
ಸೇನಾಪತಿ = ದಂಡಿನ ಒಡೆಯ
ಚಕ್ರವ್ಯೂಹ = ದುಂಡಾಗಿ ರಚಿಸಿದ ಸೇನೆಯ ಗುಂಪು
ಬಿನ್ನಯಿಸಿದನು= ಬೇಡಿಕೊಂಡನು
ವೀರಾಧಿವೀರ = ಬಹುದೊಡ್ಡ ಶೂರ
ಚದರಿಸುವದು = ಓಡಿಸುವದು
ಬೆಂಬಲವಾಗಿ = ಸಹಾಯಕವಾಗಿ
ಬೊಟ್ಟುಕಚ್ಚಿದರು = ಕೌತುಕ ಬಟ್ಟರು
ಬಾಲವೀರನು=ಶೂರನಾದ ಹುಡುಗನು
ವೀರಸ್ವರ್ಗ = ರಣಶೂರರು ಮಡಿದು ಹೊಂದುವ ಸ್ವರ್ಗ
ಮೆಚ್ಚಿಗೆ = ಪ್ರೀತಿ
ಹೆಮ್ಮೆ = ಸ್ವಾಭಿಮಾನ
ಭಾರತಮಾತೆ = ಹಿಂದದೇವಿ

## ಅಭ್ಯಸನೆಗಳಿಗೆ ಉತ್ತರ

೧ ಕೃಷ್ಣನು ಪಾಂಡವರಿಗೆ ಸಲಹೆಗಾರನು.

೨ ಕೇವಲ ಅಭಿಮನ್ಯು ಬಾಲಕನನ್ನು ಗೆಲ್ಲುವದಕ್ಕಾಗಿ ರಚಿಸಿದರು.

೩ ಅರ್ಜುನನ ಮಗ ಅಭಿಮನ್ಯುವು ಹೊರಟನು.

೪ ಕುರಿಯಹಿಂಡಿನಲ್ಲಿ ತೋಳವು ಹೊಕ್ಕು ನಾಶಮಾಡುವಹಾಗೆ ಅಭಿಮನ್ಯುವು ವ್ಯೂಹದಲ್ಲಿ ಸೇರಿ ರೌದ್ರಾವೇಶದಿಂದ ಯುದ್ಧಮಾಡಿದನು.

೫ 'ಅಭಿಮನ್ಯುವನ್ನು ಸೋಲಿಸದ ಹೊರತು ತಮಗೆ ಗೆಲವು ದೊರೆಯುವದಿಲ್ಲ' ಎಂದು ದುರ್ಯೋಧನ-ದ್ರೋಣರು ಆಲೋಚಿಸಿದರು.

೬ ಅಭಿಮನ್ಯುವನ್ನು ಮೋಸದಿಂದ ಕೈ ಕತ್ತರಿಸಿ ಕೊಂದರು.

೭ ಯುದ್ಧದಲ್ಲಿ ಸತ್ತವರಿಗೆ ವೀರಸ್ವರ್ಗ ದೊರೆಯುವದು. ಅದರಂತೆ ಅಭಿಮನ್ಯುವು ಯುದ್ಧಮಾಡುತ್ತ ಸತ್ತನು. ಅದರಿಂದ ಅವನಿಗೆ ವೀರಸ್ವರ್ಗ ಲಭಿಸುವದು.

೮ ಅಭಿಮನ್ಯುವಿನಂಥ ಬಾಲಕರು ನಮ್ಮ ದೇಶಕ್ಕೆ ಬೇಕು.
೯ ಭಾರತದ ಒಳ್ಳೆ ವೀರರೆಂದರೆ ಮುದುಕ ಭೀಷ್ಮಾಚಾರ್ಯ. ಹುಡುಗ ಅಭಿಮನ್ಯುವು.

## ೧೪. ಆನೆ

ವನ್ಯ ಪಶುಗಳಲ್ಲಿ ಆಕಾರದಿಂದ ಹಿರಿಯದಾದ ಆನೆಯ ವರ್ಣನೆ ಈ ಪಾಠದಲ್ಲಿ ಬರೆದಿದೆ. ಅದರ ಆಕಾರ-ಸ್ವರೂಪ-ಸ್ವಭಾವ-ವಾಸ್ತವ್ಯಗಳನ್ನಲ್ಲದೆ ಈ ಮಹತ್ವದ ಪ್ರಾಣಿಯ ಉಪಯೋಗವನ್ನು ಮನುಷ್ಯನು ಯಾವಯಾವ ಬಗೆಗಳಿಂದ ಮಾಡಿಕೊಂಡಿರುವನೆಂಬದನ್ನೂ ಹೇಳಿದೆ.

### ಶಬಾರ್ಥ ಪರಿಚಯ

ಮದವೇರು= ಸೊಕ್ಕಿಗೆ ಬರು
ಬಿಸಾಡುವದು= ಚಲ್ಲುವದು
ಕೋರೆಗಳು= ಉದ್ದ ಹಲ್ಲುಗಳು
ಭೀಕರಪ್ರಾಣಿ=ಭಯಂಕರಪ್ರಾಣಿ
ಪ್ರವಾಸಿಕರು= ಪ್ರವಾಸಮಾಡುವವರು
ಮಾವುತ=ಆನೆಯನ್ನು ಹಿಡಿತದಲ್ಲಿ ಇಟ್ಟುಕೊಳ್ಳುವವ
ಬುದ್ಧಿಬಲ= ವಿಚಾರಶಕ್ತಿ
ಆರ್ಭಟಿಸು= ಅರ್ಭಾಟಮಾಡು
ವೈಭವದ ಕುರುಹು= ಐಶ್ವರ್ಯದ ಗುರುತು
ಅಂಬಾರಿ= ಆನೆಯಮೇಲೆ ಇಕ್ಕುವ ಪೀಠ
ಅಂಕುಶ= ಆನೆಯ ನಿಯಂತ್ರಣಕ್ಕೆ ಉಪಯೋಗಿಸುವ ಆಯುಧ

### ಅಭ್ಯಸನಗಳಿಗೆ ಉತ್ತರ

೧ ಭಾರವಾದ ದೊಡ್ಡ ಶರೀರ, ಉದ್ದ ಸೊಂಡೆ, ಗಡುತರಕಾಲು, ಅಗಲಕಿವಿ, ಉದ್ದ ಕೋರೆ, ಕಿರಿಗಣ್ಣು. ಗಂಭೀರ ನಡಿಗೆಯುಳ್ಳ ಪ್ರಾಣಿಯಿದಾಗಿರುವದು.

೨ ಮನಬಂದಂತೆ ಓಡಾಡುವದು, ಗಿಡಗಂಟಿ–ತೋಟಪಟ್ಟಿ ನಾಶ ಮಾಡುವದು, ಎದುರಿಗೆ ಸಿಕ್ಕ ಪ್ರಾಣಿಗಳನ್ನು ತುಳಿದು ಸೀಳುವದು. ಆಗ ಅಂಕುಶಧಾರಿಯಾದ ಮಾವುತನನ್ನೂ ಕೂಡ ಲಕ್ಷಿಸುವದಿಲ್ಲ.

೩ ವನಸ್ತ್ರೀಯರು ಆಭರಣಕ್ಕಾಗಿ, ಕೆತ್ತನೆಯ ಸಾಮಾನುಗಳಿಗೆ, ಹಿಡಿಕೆಗಳಿಗೆ, ಹಣಿಗೆ ಮೊದಲಾದವುಗಳಿಗೆ ಕೋರೆಯ ಹಲ್ಲಿನ ಉಪಯೋಗ ವಾಗುವದು.

೪ ಭಾರವಾದ ತೊಲೆಗಳನ್ನು ಜಗ್ಗುವದು, ಮೇಲಕ್ಕೆತ್ತುವದು ಮೊದ ಲಾದ ಕೆಲಸ ಮಾಡುವದು.

೫ ಬೇಟೆಗಾರರು ಆನೆಯನ್ನೇರಿ ಹುಲಿಯ ಬೇಟೆಗೆ ಹೋಗುವರು. ಹುಲಿಗೂ ಆನೆಗೂ ಜಾತವೈರತ್ವವುಂಟು. ಆನೆ ಕಂಡಕೂಡಲೆ ಹುಲಿಯು ತನ್ನ ನಖದಿಂದ ಆನೆಯನ್ನು ಗಾಯಗೊಳಿಸಲು ಯತ್ನಿಸುವದು. ಆನೆಯ ಮೈದೊಗಲು ಬಹು ದಪ್ಪವಾದುದರಿಂದ ಹುಲಿಯ ಹೊಡೆತದ ಪರಿಣಾಮ ವಾಗುವದಿಲ್ಲ. ಆದರೆ ಆದರ ಹೊಡೆತದಿಂದ ಆನೆಗೆ ಸಿಟ್ಟು ಬಂದು ಹುಲಿ ಯನ್ನು ಕಾಲಲ್ಲಿ ಹಾಕಿ ಕಚಪಚನೆ ತುಳಿದು ಕೊಂದುಹಾಕುವದು.

ಒಂದುವೇಳೆ ಹುಲಿಗೆ ಆನೆಯ ಕುತ್ತಿಗೆಯಮೇಲೆ ಜಿಗಿದು ಕೂಡ್ರುವ ಆಸ್ಪದ ಸಿಕ್ಕರೆ ಅಂಥ ಪ್ರಸಂಗದಲ್ಲಿ ಹುಲಿಯೇ ಜಯಶಾಲಿಯಾಗುವದು. ಬೇಟೆಯಲ್ಲಿ ಬೇಟೆಗಾರನು ಆನೆಯ ಕುತ್ತಿಗೆಯಮೇಲೆ ಶಸ್ತ್ರಧಾರಿಯಾಗಿ ಕುಳಿತಿರುವನು. ಆಗ ಹುಲಿಗೆ ಆಸ್ಪದವಾಗುವದಿಲ್ಲ.

೬ ರಾಜರು ವೈಭವದ ಕುರುಹೆಂದು ಆನೆ ಸಾಕುತ್ತಿದ್ದರು. ಅಲ್ಲದೆ ಸೈನ್ಯಕ್ಕಾಗಿ, ಮೆರವಣಿಗೆಗಳಿಗಾಗಿ ಉಪಯೋಗಿಸುತ್ತಿದ್ದರು.

೭ ಹುಲ್ಲು, ಅಕ್ಕಿ, ತೆಂಗಿನಕಾಯಿಗಳನ್ನು ತಿನ್ನುವದು.

೮ ಮಾವುತನ ಕೈಯಲ್ಲಿ ಅಂಕುಶವಿದ್ದರೆ ಆನೆಯು ಅವನ ಹಿಡಿತ ದೊಳಗಿರುತ್ತದೆ.

೯ (ಅ) ಆನೆಯ ಸೊಂಡಿಲು ಬಲು **ದೊಡ್ಡದು, ಕಣ್ಣು** ಬಲು ಸಣ್ಣವು;

(ಆ) ಕೋರೆಗಳಂತೂ ಬಹಳ **ಉಪಯೋಗವುಳ್ಳ** ವಸ್ತುಗಳು.

(ಇ) ಕಾಡಾನೆಗಳ **ಕಾಟವೆಂದರೆ ದಾರಿಕಾರರಿಗೆ ಅದು** ಭಯಂಕರ ಕುತ್ತು;

(ಈ) ಆನೆ ಬದುಕಿದಾಗಿನ **ಬೆಲೆಯು** ಅದು ಸತ್ತಮೇಲೆಯೂ ಬರುವದಂತೆ;

೧೦ ವಿಂಧ್ಯ ಪರ್ವತದ ದಟ್ಟಡವಿಯಲ್ಲಿ ರತ್ನಗಳು ದೊರೆಯುವವಂತೆ;
ರಣರಂಗದ ಭೀಕರತೆಯು ಕಣ್ಣಿಂದ ಕಾಣಲಾಗದು.
ತಾಯಿಗಳು ಹಬ್ಬದದಿನ ಮಕ್ಕಳನ್ನು ಶೃಂಗರಿಸುವರು.
ಮೂಡಗಾಳಿಯು ಒಳಿತಾದ ಬೀಸುವಿಕೆಯಿಂದ ಮೋಡಗಳು ದಿಕ್ಕಾಪಾಲಾದವು.
ವಿಲೀನವಾದನಂತರ ಸಂಸ್ಥಾನಿಕರ ವಿಪುಲ ಸಂಪತ್ತು ಮಾಯ ವಾಯಿತು.

---

## ೧೫. ಆನೆಯೂ ಮಂಗವೂ

ಇದೊಂದು ಕತೆ–ಅಡವಿಯಲ್ಲಿಯ ಒಂದು ಆನೆಯೂ ಒಂದು ಮಂಗವೂ ತಮ್ಮ ತಮ್ಮ ಬಲ–ಚಾಪಲ್ಯಗಳನ್ನು ಕುರಿತು ವಾದ ಹೂಡಿ ನಾ ಹೆಚ್ಚು ತಾ ಹೆಚ್ಚು ಎಂಬ ಆತ್ಮ ಪೌರುಷದಿಂದ ಜಂಭ ಕೊಚ್ಚಿಕೊಳ್ಳುತ್ತ ತಮ್ಮ ವಾದ ಮುಗಿಸಲೊಲ್ಲವು. ಆನೆಯು ಬಲವನ್ನು ಮೇಲು ಮಾಡಹತ್ತಿತು. ಮಂಗವು ಚಪಲತನವನ್ನು ಮೇಲು ಮಾಡಹತ್ತಿತು. ಆಗ ಎರಡೂ ತಮ್ಮ ಮಾತಿನ ಸತ್ಯತೆಗಾಗಿ ನರಿಯ ಕಡೆಗೆ ಹೋದವು. ಬುದ್ಧಿಶಾಲಿಯಾದ ನರಿಯು ತನ್ನ ಜಾಣತನದಿಂದ ಅವರಿಬ್ಬರ ವಾದವನ್ನು ಬಗೆಹರಿಸಿ-ಕಾರ್ಯ ಸಾಧನೆಗೆ ಬಲವೂ, ಚಪಲತೆಯೂ ಎರಡೂ ಅವಶ್ಯವೆಂಬುದನ್ನು ತನ್ನ ನಿರ್ಣಯಕೊಟ್ಟಿತು. ಇದೇ ಕತೆಯು ಈ ಪಾಠದಲ್ಲಿ ಹೇಳಿದೆ.

### ಶಬ್ದಾರ್ಥ ಪರಿಚಯ

| | |
|---|---|
| ಬಲವಂತ = ಕಸುವುಳ್ಳವ | ಅಲುಗಲಿಲ್ಲ = ಹೊಯ್ದಾಡಲಿಲ್ಲ |
| ಬುದ್ಧಿಶಾಲಿ = ಒಳ್ಳೆ ಜಾಣ | ನಿರಾಶೆಗೊಳ್ಳು = ಆಶೆಯನ್ನು ಬಿಡು |
| ತುತ್ತತುದಿ = ತೀರಮೇಲೆ | ಶ್ರಮಪಡು = ಕಷ್ಟಪಡು |
| ಗಾಬರಿಗೊಂಡು = ಅಂಜಿ | ಒಪ್ಪಿದವು = ಒಡಂಬಟ್ಟವು |

### ಅಭ್ಯಸನಗಳಿಗೆ ಉತ್ತರ

೧ ಆನೆ-ಮಂಗಗಳು ನ್ಯಾಯ ಪಡೆಯಲು ನರಿಯ ಬಳಿಗೆ ಹೋದವು.

೨ ನದಿಯ ಆಚೆಯ ದಂಡೆಯಲ್ಲಿದ್ದ ಮಾವಿನಮರದಲ್ಲಿ ತುದಿಗೊಂದು ಹಣ್ಣು ಇರುವದು. ಮೊದಲು ಅದನ್ನು ತಕ್ಕೊಂಡು ಬರ್ರಿ. ಹಿಂದಿನಿಂದ ನಿಮ್ಮ ವಾದ ಬಗೆಹರಿಸುವೆನು. ಎಂದು ಅವಕ್ಕೆ ನರಿಯು ಹೇಳಿತು.

೩ ಮಂಗವು ಜಿಗಿದು ಹಣ್ಣು ಹರಕೊಂಡು ಬರುವಾಗ್ಗೆ ನೀರಿನಲ್ಲಿ ಆನೆಯಮೇಲೆ ಹತ್ತಿಕೊಂಡು ಎರಡೂ ಕೂಡಿ ನರಿಯಹತ್ತರ ಬಂದವು.

೪ ಈ ಹಣ್ಣು ಸಿಗಬೇಕಾದರೆ ಆನೆಯ ಶಕ್ತಿಯೂ ನರಿಯ ಚಪಲತೆಯೂ ಎರಡೂ ಬೇಕಾದವು. ಅಂದಮೇಲೆ ಇವೆರಡರಲ್ಲಿ ಒಂದಕ್ಕೆ ಹೆಚ್ಚು ಅನ್ನುವದು ತಪ್ಪು. ಕಡಿಮೆ ಅನ್ನುವದೂ ತಪ್ಪು

೫ ನರಿಯ ನಿರ್ಣಯವು ಯೋಗ್ಯವೆಂದು ಅರಿತು ಅದಕ್ಕೆ ಆನೆ-ಮಂಗಗಳು ಎರಡೂ ಒಪ್ಪಿದವು.

೬ ಯಾವದೊಂದರ ಜ್ಞಾನವಿಲ್ಲದೆ ವಾದಿಸಬಾರದು. ಕಾರ್ಯಸಾಧನೆಗೆ ಬಲ-ಚಾಪಲ್ಯಗಳೆರಡೂ ಮನುಷ್ಯನಲ್ಲಿರಬೇಕು. ಎಂಬಸಂಗತಿ ತಿಳಿಯುವದು.

೭ ಸರಳವಿದೆ.

೮ ನರಿ, ಮಂಗ, ಆನೆ ಈ ಮೂರರಲ್ಲಿ ನರಿಯೇ ಜಾಣತನವುಳ್ಳದ್ದು. ಆದರಿಂದಲೇ ಆನೆ-ಮಂಗಗಳ ವಾದ ಮುಕ್ತಾಯವಾಯಿತು.

---

# ೧೬. ಹೆಣ್ಣುಮಕ್ಕಳು

## (ಕವಿತೆ)

ಹೊನ್ನಮ್ಮ ಎಂಬ ಕವಿಯಿತ್ರಿಯು ಹೆಣ್ಣುಮಕ್ಕಳನ್ನು ಯಾವ ಯಾವ ಬಗೆಯಿಂದ ಉಪಚರಿಸಬೇಕೆಂಬ ನೀತಿಯನ್ನು ಪುರುಷರಿಗಾಗಿ ಮುಖ್ಯತಃ ಹೆಣ್ಣು ಹಡೆದ ತಂದೆಗಳಿಗೆ ಬೋಧೆ ಮಾಡಿರುವಳು.

## ಶಬ್ದಾರ್ಥ ಪರಿಚಯ

ಬೀಳುಗಳೆವರು = ನಿಂದಿಸುವರು
ಕಣ್ಣುಕಾಣದಗಾವಿಲರು = ಜ್ಞಾನ ವಿಲ್ಲದ ಮೂಢರು
ಕುಲಪುತ್ರ = ಒಳ್ಳೆಕುಲದಲ್ಲಿ ಹುಟ್ಟಿದ ಮಗ
ಉದ್ಧರಿಸಲು=ಉದ್ಧಾರಮಾಡಲಿಕ್ಕೆ
ಒಳುಗುವರನಿಗೆ= ಒಳ್ಳೇಹುಡುಗನಿಗೆ
ಕುಲಕೋಟಿಯನು =ತನಗೆಸಂಬಂಧಿಸಿದ ವಂಶಗಳನ್ನು
ಬಗೆದು = ವಿಚಾರಮಾಡಿ
ಒಗೆದಬಳುಗುವರ = ಹುಟ್ಟಿದ ಒಳ್ಳೆಯ ಮಗ
ನಂಟುತನ = ಶರೀರಸಂಬಂಧಿಗಳು
ಹತ್ತುಗೆ = ಹತ್ತುಗಡೆ
ನೇಹದಎಣಿಕೆ = ಮಿತ್ರತ್ವದ ವಿಚಾರ
ಎದೆಗರಗಿ = ಮನಮೆಚ್ಚಿ
ನಡೆವೆಣಕೆ= ಹೆಣದಂತೆ ಇರುವವನಿಗೆ
ಅರ್ಥವು = ಸಂಪತ್ತು
ತಾವುಳಿದು = ತಾವುಬಿಟ್ಟು
ಒಡವೆಗುಡುವುದು = ವಸ್ತುಗಳನ್ನು ಕೊಡಬೇಕು
ಒಂದೆಊರೊಳು = ತಾನಿದ್ದಊರಲ್ಲಿ
ನೆರೆಯೂರು = ಸಮೀಪದ ಹಳ್ಳಿ
ಕಾಲವಅರಿತು = ಪ್ರಸಂಗನೋಡಿ

## ಸರಳಅರ್ಥ

೧ ಹೆಣ್ಣು, ಹೆಣ್ಣು ಎಂದು ಬಹುಜನ ಗಂಡಸರು ತಿರಸ್ಕರಿಸುವರು. ಆದರೆ ಅಂಥವರು ಹುಟ್ಟಿದ್ದು ಹೆಣ್ಣಿನಿಂದ, ಬೆಳೆದದ್ದು ಹೆಣ್ಣಿನಿಂದ, ಜೋಪಾನವಾದದ್ದು ಹೆಣ್ಣಿನಿಂದ. ಅಂದಮೇಲೆ ಮೂರ್ಖರು ಹೆಣ್ಣಿಗೆ ಹೀಗೇಕೆ ತಿರಸ್ಕಾರಮಾಡುವರು ?

೨ ಗಂಡುಹುಡುಗನು ಓದುಬರೆಹ ಕಲಿತು ಜಾಣನಾದರೆ ಮಾತ್ರ ಮನೆತನ ಸಾಗಿಸಿಕೊಂಡು ಹೋಗಲು ಸಮರ್ಥನಾಗುವನು. ಇಲ್ಲದಿದ್ದರೆ ಇಲ್ಲ. ಆದರೆ ವಿದ್ಯೆಕಲಿಯದ ಹುಡುಗಿಯಾದರೂ ಆಕೆಯನ್ನು ಚಲೋ ವರನಿಗೆ ಕೊಟ್ಟರೆ ತನ್ನ ಅತ್ತೆಯ ಹಾಗು ತೌರಮನೆಯ ಉದ್ಧಾರಕಳಾಗುವಳು.

೩ ಮಗಳನ್ನು ಎಂಥವನಿಗೆ ಕೊಡಬೇಕು.
ಒಳ್ಳೆ ಗುಣಿಯೂ, ಸುವಿಖ್ಯಾತಿಯೂ, ಸುಂದರನೂ, ಶಿಷ್ಟಕುಲದಲ್ಲಿ ಹುಟ್ಟಿದವನೂ ಆದ ವರನನ್ನು ಶೋಧಿಸಿ ಕೊಡಬೇಕು.

೪ ಎಂಥವನಿಗೆ ಕೊಡಬಾರದು ?

ಹಣದ ಆಶೆಗಾಗಿ ಬೀಗರಲ್ಲಿ, ಆಪ್ತರಲ್ಲಿ, ಗೆಳೆಯರಲ್ಲಿ ಕೊಡುವ ಮನಸ್ಸು ಮಾಡಬಾರದು. ಹಾಗು ಕುಲಹೀನ, ರೂಪಹೀನ, ಪ್ರಾಯಹೀನನಾದ ಹಣದ ಸ್ವರೂಪದವನಿಗೆ ಹೆಣ್ಣು ಕೊಡಬಾರದು.

೫ ಹೆಣ್ಣುಮಕ್ಕಳನ್ನು ಹೇಗೆ ಉಪಚರಿಸಬೇಕು ?

ನಾವು ಬಡವರು ನಮ್ಮಲ್ಲಿ ಐಶ್ವರ್ಯವಿಲ್ಲ ನಾವು ಎಲ್ಲಿಂದ ಹೆಣ್ಣುಮಕ್ಕಳಿಗೆ ಕೊಡಬೇಕು ? ಇತ್ಯಾದಿಯಾಗಿ ನುಡಿದು ವಂಚನೆ ಮಾಡಬಾರದು. ತಾವು ತೊಡುವದನ್ನು ಬಿಟ್ಟಾದರೂ ಉಣ್ಣುವದನ್ನು ಬಿಟ್ಟಾದರೂ ಹೆಣ್ಣುಮಕ್ಕಳಿಗೆ ಉಡಲು, ತೊಡಲು ಕೊಡಬೇಕು.

೬ ಇದ್ದೂರಲ್ಲಿದ್ದ ಹೆಣ್ಣುಮಕ್ಕಳನ್ನು ಹಬ್ಬ-ಹುಣ್ಣಿವೆಗಳಿಗೆ ಆದರದಿಂದ ಕರಿಸಿಕೊಳ್ಳಬೇಕು. ನೆರೆಯೂರಲ್ಲಿ ಜೀವಿಸುವ ಹೆಣ್ಣುಮಕ್ಕಳನ್ನು ಪ್ರಸಂಗನೋಡಿ ಕರೆಸಿಕೊಳ್ಳಬೇಕು.

## ಅಭ್ಯಸನಗಳಿಗೆ ಉತ್ತರ

೧ ತಿಳುವಳಿಕೆಯಿಲ್ಲದವರು, ಅಶಿಕ್ಷಿತರು, ಹಳ್ಳಿಗರು ಇವರು ಕಣ್ಣು ಕಾಣದ ಗಾವಿಲರು.

೨ ಹಳ್ಳಿಯುವರಿಗೆ ಶಿಕ್ಷಣ ದೊರೆತಿರುವದಿಲ್ಲ. ಅವರಿಗೆ ಗಾವಿಲರೆಂದು ಅನ್ನುವರು.

೩ ಒಳ್ಳೆಯ ವರನಿಗೆ ಹೆಣ್ಣುಮಗಳನ್ನು ಕೊಟ್ಟರೆ ಚನ್ನಾಗಿ ಸಂಸಾರ ಮಾಡಿ ತನ್ನ ತೌರಮನೆ-ಅತ್ತೆಯಮನೆಗಳಿಗೆ ಕೀರ್ತಿ ತರುವಳು.

೪ ಒಳ್ಳೆ ಗುಣವಂತನಿಗೆ, ಕುಲೀನನಿಗೆ, ಸಂಭಾವಿತನಿಗೆ, ಸುಂದರನಿಗೆ ಹೆಣ್ಣುಮಗಳನ್ನು ಲಗ್ನಮಾಡಿಕೊಡಬೇಕು.

೫ ದುಡ್ಡಿನ ಆಶೆಯಿಂದ ಆಪ್ತರೇ ಇರಲಿ, ಬೀಗರೇ ಇರಲಿ, ಸ್ನೇಹಿತರೇ ಇರಲಿ ಅವರಿಗೆ ಹೆಣ್ಣು ಕೊಡಬಾರದು. ಹಾಗು ಗುಣ ರೂಪ ಯೌವನಗಳಿಲ್ಲದ ಹಣದಂಥವನಿಗೆ ಹೆಣ್ಣು ಕೊಡಬಾರದು.

೬ ಇದ್ದೂರಲ್ಲಿ ಇದ್ದ ಮಗಳನ್ನು ಹಬ್ಬ-ಹುಣ್ಣಿವೆಗಳಿಗೆ ಕರೆತರಬೇಕು

೭ ಪರವೂರಲ್ಲಿ ಇದ್ದ ಮಗಳನ್ನು ಪ್ರಸಂಗ ಬಿದ್ದಾಗ ಕರೆತರಬೇಕು.

೮ ಹೆಣ್ಣಿಗೆ ಪ್ರಾಧಾನ್ಯತೆ ಕೊಟ್ಟಿದೆ. ಯಾಕಂದರೆ ಅವಳಿಂದಲೇ ಸಂಸಾರ.

| | |
|---|---|
| ೯ ಪುತ್ರ=ಗಂಡುಹುಡುಗ ಮದುವೆಯಾಗದವ | ಪುತ್ರಿ = ಹೆಣ್ಣುಮಗಳು ಮದುವೆಯಾಗದ |
| ಕುಮಾರ = ಮಗ | |
| ತನುಜ = ತನ್ನ ಶರೀರದಿಂದ ಹುಟ್ಟಿದವ | ತನುಜೆ = ತನ್ನ ಶರೀರದಿಂದ ಹುಟ್ಟಿದವಳು |
| ಮಗ-ಮಗಳು, ತಾಯಿ-ತಂದೆ, | ಅತ್ತೆ-ಮಾವ ಗಂಡ-ಹೆಂಡತಿ |

| | |
|---|---|
| ೧೦ ನೇಹ = ಪ್ರೀತಿ | ನಂಟುತನ = ಬೀಗತನ |
| ಬೀಳ್ಗಳೆ = ತುಚ್ಛಮಾಡು | ಕಡು = ಬಹಳ |
| ಉದ್ಧರಿಸು = ಎತ್ತಿಹಿಡಿ | |

---

## ೧೭. ಪ್ರಾಪ್ತಿಯ ಅರ್ಥಪಾಲು

ಮೀನು ಬಲೆಗಾರನೊಬ್ಬನ ಗಳಿಕೆಯಲ್ಲಿ ಆಶೆಯಿಂದ ಪಾಲುಬಯಸಿದ ಅಮೀರನ ಮನೆಯ ಕಾವಲುಗಾರನು ತನ್ನ ಹಾನಿಯನ್ನು ಮಾಡಿಕೊಂಡ ಕಥೆಯು ಈ ಪಾಠದಲ್ಲಿ ಬಂದಿದೆ. ಬಲೆಗಾರನು ತನ್ನ ಗಳಿಕೆಯನ್ನು ಅಪಹರಿಸುವ ಕಾವಲುಗಾರನಿಗೆ ತಾನು ಏನೊಂದು ಕ್ರಿಯೆಯನ್ನೂ ಮಾಡದೆ ಪರ್ಯಾಯದಿಂದ ಆ ಕಾವಲುಗಾರನ ಒಡೆಯನಿಂದಲೇ ಶಾಸನಮಾಡಿಸಿದ ತನ್ನ ದುರಾಶೆಯ ಫಲವಾಗಿ ಕಾವಲುಗಾರನು ಒಳಿತಾಗಿ ಪೆಟ್ಟುತಿಂದ; ಕೆಲಸದಿಂದ ದೂರಾಗಿ ತಾನು ಗಳಿಸುತ್ತಿದ್ದ ಗಳಿಕೆಯನ್ನು ಕಳಕೊಂಡ.

## ಶಬ್ದಾರ್ಥ ಪರಿಚಯ

ಪ್ರಾಪ್ತಿ = ಗಳಿಕೆ
ವೈಭವ = ಸಡಗರ
ಪಕ್ವಾನ್ನ = ರುಚಿಕಟ್ಟಾದ ಅಡಿಗೆ
ನಿರ್ವಾಹವಿಲ್ಲದೆ = ಗತಿಯಿಲ್ಲದೆ
ಹಟ = ಭಂಡಿತನ
ಕೈಬಿಗಿಹಿಡಿ ಕೈನಿಲ್ಲಿಸು:
ಸಾಕಮಾಡು, ತಡೆ
ಅಮೀರ = ರಾಜನ ಸರದಾರ
ಪಾಲಿನಬೆಲೆ = ಭಾಗದಕಿಮ್ಮತ್ತು
ಕೆಲಸದಿಂದದೂರಮಾಡಿ= ಕೆಲಸ ದಿಂದ ತೆಗೆದು

## ಅಭ್ಯಸನಗಳಿಗೆ ಉತ್ತರಗಳು

೧ ಸಮುದ್ರಕ್ಕೆ ಭರತಿಯುಂಟಾದುದರಿಂದ ಅಂದು ಮೀನು ಸಿಗಲಿಲ್ಲ.

೨ ಅಮೀರನಿಗೆ ಮೀನು ಬೇಕಾಗಿಯೇ ಇತ್ತು. ಈ ಮೀನಕ್ಕೆ ಬೆಲೆ ಬರುವದು ಕಾವಲುಗಾರನಿಗೆ ತಿಳಿದಿತ್ತು. ಬಂದ ಬೆಲೆಯಲ್ಲಿ ತನಗೂ ಕೆಲವು ಹಣ ದೊರೆಯಬೇಕೆಂದು ಆತನು ಮೀನಗಾರನನ್ನು ಒಳಗೆ ಬಿಡಲಿಲ್ಲ.

೩ ಮೀನದ ಬೆಲೆಯು ನನ್ನ ಬೆನ್ನ ಮೇಲೆ ಹೊಯ್ಯುವ ಹೊಸ ಬಾರ ಕೋಲಿನ ಒಂದುನೂರು ಬಡಿತಗಳು, ಎಂದು ಬಲೆಗಾರ ಹೇಳಿದನು.

೪ ಎಲ್ಲರೂ ದುಡ್ಡನ್ನು ಇಚ್ಛೆ ಮಾಡುವರು. ಇವನು ಮಾತ್ರ ತನಗೆ ಬಡಿತಗಳು ಬೇಕೆಂದು ಬಯಸುವನು. ದುಡ್ಡಿನ ಬೆಲೆಯನ್ನರಿಯದ ಇವನು ಅಜ್ಞಾನಿ ಅಂದರೆ ಹುಚ್ಚನು ಇರಬಹುದೆಂದು ಅಮೀರನು ತಿಳಿದನು.

೫ ಕಾವಲುಗಾರನಿಗೆ ಹೊಸ ಬಾರಕೋಲಿನಿಂದ ಒಳಿತಾದ ಐವತ್ತು ಏಟುಗಳು ಬಿದ್ದುವಲ್ಲದೆ ಇದುವರೆಗೆ ಆತನು ದುಡಿಯುತ್ತಿದ್ದ ಕೆಲಸ(ನವಕರಿ) ದಿಂದ ದೂರಾದನು. ಇದೇ ಕಾವಲುಗಾರನಿಗೆ ದೊರೆತ ಶಿಕ್ಷೆ.

# ೧೮. ನಾಗರಪಂಚಮಿ

ನಮ್ಮ ಹಿಂದೂ ಜನರಲ್ಲಿ ಹಬ್ಬಗಳ ಸಂಖ್ಯೆಯು ಹೆಚ್ಚು. ಹಾಗು ಅವರು ಆಚರಿಸುವ ಹಬ್ಬಗಳ ಸೊಬಗೂ ಹೆಚ್ಚು. ನಾಗಪಂಚಮಿಯು ನಮ್ಮ ದಕ್ಷಿಣ ಹಿಂದುಸ್ಥಾನದಲ್ಲಿ ರೂಢವಾಗಿರುವ ಸಡಗರದ ಹಬ್ಬವಾಗಿದೆ. ಈ ಹಬ್ಬದ ಬಗ್ಗೆ ಈ ಪಾಠದಲ್ಲಿ ಎಲ್ಲರಿಗೂ ತಿಳಿಯುವಂತೆ ಬರೆದಿದೆ.

## ಶಬ್ದಾರ್ಥ ಪರಿಚಯ

ವಿನೋದದಆಟ = ಮನರಂಜನೆಯ ಆಟ

ತದಿಗೆ = ಮೂರನೆಯ ತಿಥಿ

ಜೊತೆಗೆ = ಸಂಗಡ

ಮೂರ್ತಿ = ಪ್ರತಿಮೆ

ಕೀರ್ತನೆ = ದೇವರ ಭಜನೆ

ಬೆಡಗಿನಬಟ್ಟೆ = ಚೆಂದವಾದ ಅರಿವೆ

ಮುಡಿದುಕೊಳ್ಳು = ತಲೆಯಲ್ಲಿ ಹಾಕಿಕೊಳ್ಳು

ಮಿಂದು = ಜಳಕಮಾಡಿ

ನಲಿದಾಡು = ಸಂತೋಷಪಡು

ನೈವೇದ್ಯ = ದೇವರ ಎಡಿ

ಸಿಂಗಾರಾಗಿ = ಡೌಲಾಗಿ

ಪ್ರದರ್ಶನ = ಜನರು ನೋಡುವದಕ್ಕೆ ಒತ್ತಟ್ಟಿಗೆ ಪದಾರ್ಥಗಳನ್ನಿಡುವದು

## ಅಭ್ಯಸನಗಳಿಗೆ ಉತ್ತರಗಳು

೧ ನಾಗರಪಂಚಮಿ ಶ್ರಾವಣಮಾಸದಲ್ಲಿ ಬರುವದು.

೨ ಅಂದು ನಾಗಪ್ಪನ ಮೂರ್ತಿಪೂಜೆಮಾಡುವರು. ಅರಳು, ಕೊಬ್ಬರಿ, ತಂಬಿಟ್ಟು, ಹಾಲುಹಾಕಿ ನೀರು ಹಾಕುವರು.

೩ ನಾಲ್ಕು ದಿನಗಳ ಹಬ್ಬ; ಚೌತಿ ಹಾಗು ಪಂಚಮಿಗಳು ಮಹತ್ವದ ದಿನಗಳು.

೪ ಬೆಡಗಿನ ಅರಿವೆ ಹಾಕಿಕೊಂಡು ಜೋಕಾಲಿ, ಜೀಕ ಆಡುವರು.

೫ ದೊಡ್ಡವರು ಪಂದ್ಯಾಟಗಳನ್ನಾಡುತ ವಿನೋದಪಡುವರು.

೬ ಪೂಜಾ ಪುನಸ್ಕಾರಗಳಿಗೆ ನಾಗರ ಪಂಚಮಿ ಮಹತ್ವನಿದೆ. ಹೆಂಗಸರಲ್ಲಿ ಈ ಭಕ್ತಿಹೆಚ್ಚು. ಆದಕ್ಕಾಗಿ ಅದು ಹೆಣ್ಣುಮಕ್ಕಳ ಹಬ್ಬವಾಗಿದೆ.

೭ ಮೇಲಾಟಗಳು—ಹಣ್ಣು ಒಗೆಯುವದು, ಕಲ್ಲು-ಕೊಡ-ಇರಸು ನೆಗವುವದು, ಜೋಕಾಲಿ ಜೀಕುವದು, ಗುರಿಹೊಡೆಯುವದು ಇವೆ.

೮ ನಾಗಪ್ಪನಿಗೆ ಹಾಲು ಹೊಯ್ಯುವದು, ಜೋಕಾಲಿ ಆಡುವದು. ತಂಬಿಟ್ಟು ಅರಳು ಮೊದಲಾದವನ್ನು ಸಿದ್ಧಪಡಿಸುವದು. ಇವುಗಳಿಂದ ಹೆಂಗಸರು ಮನಸಿಗೆ ಸೊಗಸುಮಾಡಿಕೊಳ್ಳುವರು.

೯ (ಅ) ನಾಗಪಂಚಮಿಯಲ್ಲಿ **ಕಡಬು—ತಂಬಿಟ್ಟುಗಳ** ಊಟ ಮಾಡುವೆವು.

(ಆ) ನಾಗಪಂಚಮಿ **ಹಬ್ಬವು** ಶ್ರಾವಣ ಶುದ್ಧ **ತದಿಗೆಗೆ** ಆರಂಭವಾಗುವದು.

(ಇ) ನಾಗಪ್ಪನಿಗೆ ತಂಬಿಟ್ಟುಗಳ **ನೈವೇದ್ಯ** ಮಾಡುವರು.

(ಈ) ಜೋಕಾಲಿಯ **ಸರತಿಗಾಗಿ** ಜನರು ಕಾಯುತ್ತ ನಿಲ್ಲುವರು.

(ಉ) ಶಿವನ ಅತ್ಯಂತ **ನಿಷ್ಠಾವಂತ ಭಕ್ತ** ಸಿರಿಯಾಳ ಸೆಟ್ಟಿ.

(ಊ) ನಾಗಪಂಚಮಿಯಲ್ಲಿ ಅತ್ತೆಯ ಮನೆಯ ಸೊಸೆಂದಿರು ತೌರಮನೆಗೆ ಬಂದಿರುತ್ತಾರೆ.

೧೦ ನೈವೇದ್ಯ = ದೇವರಿಗೆ ತೋರಿಸುವ ಎಡಿ

ನಿಷ್ಠೆ = ದೇವರಲ್ಲಿ, ಗುರುಗಳಲ್ಲಿ, ತಾಯಿ ತಂದೆಗಳಲ್ಲಿ ಇಡುವ ಭಕ್ತಿ

ಪ್ರದರ್ಶನ = ಜನರಿಗೆಹೊಸಹೊಸ ಪದಾರ್ಥ ತೋರಿಸಲು ಪದಾರ್ಥಗಳನ್ನು ಮಂಡಿಸಿಟ್ಟ ಸ್ಥಳ

ಮೇಲಾಟ = ತಮ್ಮ ಶಕ್ತಿ, ಜಾಣತನಗಳನ್ನು ಇನ್ನೊಬ್ಬರ ಶಕ್ತಿ-ಜಾಣತನಕ್ಕೆ ಹೆಚ್ಚು ಮಾಡಿ ತೋರಿಸುವದು.

ಬೆಡಗು = ಸುಂದರ (ಚೆಂದ)

ಭೂಷಣ = ಶೋಭೆ

ಮುಡಿ = ತಲೆಯಲ್ಲಿ ಧರಿಸುವದು

ತಣಿಸು = ಮನಸ್ಸನ್ನು ತೃಪ್ತಿಪಡಿಸು

## ೧೯. ಬತ ದಬೆಳೆ

ಬೆಳವಲನಾಡಿನ ಹುಡುಗನೊಬ್ಬನು ಮಲೆನಾಡಿನ ಹಳ್ಳಿಗೆ ತನ್ನ ತಂದೆಯ ಕೂಡ ಹೋಗಿದ್ದನು. ಅಲ್ಲಿ ಬೆಳೆದ ಬತ್ತದ ಪೈರು ನೋಡಿ

ಕೌತುಕಪಟ್ಟನು. ಅವನ ತಂದೆಯು ಅವನಿಗೆ ಬತ್ತದ ಬೆಳೆಯ ಯಾವತ್ತು ಸಂಗತಿಯನ್ನು ತಿಳಿಯುವಂತೆ ಹೇಳಿದನು. ಅದು ಈ ಪಾಠದಲ್ಲಿ ಬರೆದಿದೆ.

## ಶಬ್ದಾರ್ಥ ಪರಿಚಯ

ಕಂಗೊಳಿಸು= ಕಣ್ಣಿಗೆ ಚಂದಕಾಣು
ಮಲೆನಾಡು= ಮಲ್ಲಾಡು(ಗುಡ್ಡದ ಸೀಮೆ)
ವೆಚ್ಚವು= ಖರ್ಚು (ಲಾಗವಡ)
ಮೇಲ್ವಾಳಿ= ಮೇಲಿನಗದ್ದೆ
ಕಿಪ್ಪಾಳಿ= ಕೆಳಗಿನಗದ್ದೆ
ಕೂರಿಗೆ= ಬೀಜ ಬಿತ್ತುವದಕ್ಕೆ ಒಕ್ಕಲಿಗನು ಮಾಡಿಕೊಂಡ ಸಾಧನ
ಮೊಳಿಕೆ= ಚಿಗುರೊಡೆ
ನೆಟ್ಟಿಗೆ= ಅಗಿಯನ್ನು ಹಚ್ಚುವದು
ಕಳ್ಳರಕಾಟ= ತುಡುಗರ ಉಪದ್ರವ
ಮಂಚಿಕೆ = ನೆಲದಿಂದ ಎತ್ತರದಲ್ಲಿ ಕಟ್ಟಿದ ಗುಡಿಸಲು
ಸಂಘ= ಸಹಕಾರದ ಕೂಟ
ಸೌಮ್ಯಆಹಾರ= ಬೇಗ ಪಚನವಾಗುವ ಆಹಾರ

## ಅಭ್ಯಾಸನಗಳಿಗೆ ಉತ್ತರ

೧ ಕೆಂಪು ನೆಲವಿದ್ದ ಭೂಮಿಯಿರಬೇಕು. ಆಂದರೆ ಬತ್ತ ಬೆಳೆಯುವದು.

೨ ಬತ್ತಕ್ಕೆ ಯಾವಾಗಲೂ ನೀರು ಬೇಕು. ಬೆಳವಲಕ್ಕೆ ಮಳೆ, ನೀರು ಕಡಿಮೆಯಾದ್ದರಿಂದ ಬೆಳವಲದಲ್ಲಿ ಬತ್ತ ಬೆಳೆಯುವದಿಲ್ಲ.

೩ ಏರು ಏರಾಗಿ ಪಾವಟಿಗೆಯಂತೆ ಹಾಳಿಗಳನ್ನು ಮಾಡುತ್ತಾರೆ.

೪ ಧಾರವಾಡ-ಬೆಳಗಾವ ಜಿಲ್ಲೆಗಳಲ್ಲಿ ಬತ್ತದ ಬೀಜಗಳನ್ನು ಕೂರಿಗೆಯ ಸಹಾಯದಿಂದ ಬಿತ್ತುವರು.

೫ ಕೊಂಕಣ–ಕಾರವಾರಗಳಲ್ಲಿ ಮೊದಲು ಮಡಿಯಲ್ಲಿ ಬತ್ತಹಾಕಿ ಅಗಿಗಳನ್ನು ಬೆಳಿಸುವರು. ಅಗಿಗಳು ದೊಡ್ಡವಾದಬಳಿಕ ಕಿತ್ತಿ ನಾಟಿಕೆಗಳನ್ನು ಹೊಲ (ಗದ್ದೆ)ಗಳಲ್ಲಿ ಊರುವರು.

೬ ಅಡವೀಮಿಕ (ಕಾಡಹಂದಿ)ಗಳ ಕಾಟವು ಹೆಚ್ಚು.

೭ ಹೊಲದ ಸುತ್ತಲು ತಂತಿಯ ಬೇಲಿ, ಕಲ್ಲಿನಗೋಡೆ ಕಟ್ಟುವರು. ಸರಕಾರದಿಂದ ಬಂದೂಕಗಳ ಲಾಯಸನ್ಸ (ಪರವಾನಿಗೆ) ತಕ್ಕೊಳ್ಳುವರು.

೮ ಆಶ್ವಿನ-ಭಾದ್ರಪದಗಳಲ್ಲಿ ಬೆಳೆಯನ್ನು ಕೊಯ್ದನಂತರ ಹುಲ್ಲು ಗೂಡು ಒಣಗಬಿಡುವರು. ಒಣಗಿದ ಬಳಿಕ ತುಳಿಸಿ ಇಲ್ಲವೆ ಬಡಿಗೆಯಿಂದ ಬಡಿದು ಮೊರದಿಂದ ತೂರಿ ರಾಶಿಮಾಡುವರು.

೯ ಇದು ಸಾರ್ವತ್ರಿಕರಿಗೆ ಸೌಮ್ಯವಾದ ಆಹಾರವಾದ್ದರಿಂದ ಹಾಗೂ ಸಾಕಷ್ಟು ಬೆಳೆಯುವಲ್ಲಿ ಬೆಳೆಯುವದರಿಂದ ಮುಖ್ಯಧಾನ್ಯವೆಂದು ಎಣಿಸಲ್ಪಡುತ್ತದೆ.

೧೦ ಬತ್ತದ ಗದ್ದೆಯ ವರ್ಣನೆ

# ೨೦. ತಡಸಲು

## (ಕವಿತೆ)

ಸೃಷ್ಟಿ ಚಮತ್ಕಾರಗಳಲ್ಲಿ ರಮ್ಯವಾಗಿ ತೋರುವ ದೃಶ್ಯಗಳಲ್ಲಿ ನೀರು ಮೇಲಿಂದ ಕೆಳಗೆ ಕಡಕೊಂಡು ಬೀಳುವ ಅಂದರೆ ತಡಸಲಿನ ಶೋಭೆಯೂ ಒಂದಾಗಿದೆ. ಅದನ್ನು ನೋಡಿ ಕವಿಯು ವರ್ಣನೆಮಾಡಿದ ಸಂಗತಿಯು ಈ ಪಾಠದಲ್ಲಿ ಇದೆ.

## ಶಬ್ದಾರ್ಥ ಪರಿಚಯ

| | |
|---|---|
| ತಡಸಲು= ದಬದಬೆ | ಅದ್ಭುತ= ಬಹು ಭಯಂಕರ |
| ಮನನಡುಗು= ಅಂಜು | ಗದರಿಸು= ನಡುಗು |
| ಗುಡುಗು= ಮೋಡದ ಗರ್ಜನೆ | ಧುಮುಕು= ಕಡಕೊಂಡುಬೀಳು |
| ತುಂತುರ= ಸೀರಾದ ಹನಿ | ಸ್ತಂಭಿತಮೈ= ಹೊಯ್ದಾಡದ ಶರೀರ |
| ಅಂಚು= ದಂಡೆ (ಸೆರಗು) | ಕಾಲಂಟಿತ್ತು= ಕಾಲುಊರಿನಿಂತಿತ್ತು |
| ಸರ= ಮಾಲೆ | ಊಹೆ= ತರ್ಕ |
| ದಿಡುಗು= ನೋಟ | ದಿಗಂತ= ದಿಕ್ಕಿನ ಕೊನೆ |

## ಸರಳಅರ್ಥ

೧ ದಡದಡ ಸಪ್ಪಳವಾಗುವ ತಡಸಲ ನೋಡಿ ನನ್ನ ಎದೆ ದಡದಡ ಬಡೆಯುತ್ತದೆ. ತಡಸಲಿನ ಮೂಲಕ ಗಿಡ, ಮರ, ಜನಗಳ ಮನಸ್ಸು ನಡಗುತ್ತಿದೆ.

೨ ನೋಡದ ಗರ್ಜನೆಯೆ ಈ ತಡಸಲಿನ ಸ್ವರೂಪವಾಗಿದೆ. ಇದರ ನೋಡದಿಂದ ತುಂತುರ ಹನಿಯು ಮಳೆ ಹುಟ್ಟಿ ಆ ಮಳೆಯು ನದಿಯುದಂಡೆಯಲ್ಲಿ ಬಿದ್ದು ಆ ನೀರು ಒಳಿತಾಗಿ ಮಿಂಚಿ ತೋರುತ್ತದೆ.

೩ ತಡಸಲಿನ ನೋಟವು- ಮುತ್ತಿನ ಮಾಲೆಗಳಂತೆ ಬೀಳುವ ನೀರಿನ ಧಾರೆಗಳು ಕಾಣುವವು, ಕಾಜಿನ ಕಂಬಗಳು ಮೇಲಿಂದ ಕೆಳಗೆ ಉರುಳುವ ಹಾಗೆ ಕಾಣುವವು. ಕಾಮನಬಿಲ್ಲು ಹುಟ್ಟಿ ಬಾಗಿ ತೋರುವವು. ನೀರಿನ ಹೂವು (ಪೂತಹನಿಗಳು) ಕುಣಿದಾಡಹತ್ತಿದಂತೆ ಕಾಣುವವು.

೪ ಭೂಮಿ-ಆಕಾಶಗಳ ನಡುವಿನ ಸೌಂದರ್ಯವೆಂದರೆ ಈ ತಡಸಲಿನ ಭಯಂಕರ ನೋಟವು. ಅದರ ಭಯಂಕರ ಸ್ವರೂಪವು ನನ್ನನ್ನು 'ಇಲ್ಲಿ ಬಾ' ಎಂದು ಕರೆಯುವದು ಹಾಗು ಅದು 'ಅಲ್ಲಿ ನಿಲ್ಲು' ಎಂದು ನನ್ನನ್ನು ಅಂಜಿಸುತ್ತಿರುವದು.

೫ ಹೊಳೆಯು ಕಡಕೊಂಡು ಬೀಳುವಂತೆ ನನ್ನ ಮನಸ್ಸೂ ಕಡಕೊಂಡು ಬೀಳುತ್ತದೆ, ದೇಹವು ಕಂಬದಂತೆ ಹೊಯ್ದಾಡದೆ ನಿಲ್ಲುತ್ತ ಇದೆ. ಕಾಲು ನಿಂತಲ್ಲಿ ಅಂಟಿಕೊಂಡು ನಿಂತಿವೆ. ನನ್ನ ಮನದ ತರ್ಕವು ಇದರಿಂದ ಏನೊಂದೂ ಕಾಣದೆ ಆಕಾಶದ ಆಚೆಗೆ ಬಲುದೂರ ಹೋಗಹತ್ತಿದೆ.

## ಅಭ್ಯಸನಗಳಿಗೆ ಉತ್ತರ

೧ ತಡಸಲಿನ ಸಪ್ಪಳದ ಅರ್ಭಾಟಕ್ಕೆ ಎದೆ ನಡಗುವದು.

೨ ಮುತ್ತಿನ ಮಾಲೆಗಳು ಹರಿಯುವಂತೆ, ಕಾಜಿನ ಕಂಬಗಳು ಮೇಲಿಂದ ಉರುಳಿ ಬೀಳುವಂತೆ ಕಾಣುವದು.

೩ ಸೂರ್ಯನ ಪ್ರಕಾಶ ಹಾಗು ನೀರಿನ ತುಂತುರ ಹನಿಗಳು ಕೂಡಿದಾಗ ಕಾಮನ ಬಿಲ್ಲು ಕಾಣುವದು.

೪ ಭಯವನ್ನು ಹುಟ್ಟಿಸುತ್ತದೆ.

೫ ಸಪ್ಪಳದಿಂದ ಭಯವು ಹುಟ್ಟಿ ಅದು 'ಇಲ್ಲಿಬಾ' 'ಅಲ್ಲಿನಿಲ್ಲು' ಎಂದು ನನ್ನನ್ನು ಕರೆದಂತೆ ಭಾಸವಾಗುತ್ತದೆ.

೬ ದೇಹ, ಮನಸ್ಸುಗಳು ಕುಂಠಿತವಾದವೆಂದು ಹೇಳಿದ ಕೊನೆಯ ಪದ್ಯದ ಸಾಲುಗಳು ಸೊಗಸಾಗಿವೆ, ಹಾಗು ತಡಸಲಿನ ಸಪ್ಪಳವನ್ನು ಅನುಕರಣ ಶಬ್ದದಿಂದ ತೋರಿಸುವ ೧ನೇ ನುಡಿಯ ಸಾಲುಗಳು ರಮ್ಯವಾಗಿವೆ.

೭ ಈ ಕವಿತೆಯ ಭಾವವನ್ನು ಸರಳ ಅರ್ಥದಲ್ಲಿ ಕಾಣಬಹುದು.

೮ (ಅ) ಹೊಳೆಯ ದಂಡೆಯಲ್ಲಿ ಜಡಿಮಳೆಯ ಸ್ವರೂಪ ಕಾಣುವದು.

(ಆ ನೀರು ಚಲ್ಲಾಪಿಲ್ಲಿಯಾಗಿ ಬೀಳುವದು ತೋರುವದು.

## ೨೧. ಗೆರಸಪ್ಪೆಯ ತಡಸಲು

ಮೈಸೂರ ಸೀಮೆಯಲ್ಲಿ ಹರಿದ ಶರಾವತಿ ನದಿಗೆ ಗೆರಸಪ್ಪೆಯ ಹತ್ತರ ತಡಸಲಿನ ಸ್ವರೂಪವುಂಟಾಗಿದೆ. ಅದರ ನೋಟವು ನೋಡುವವರಿಗೆ ಬಲು ರಮ್ಯವೆನಿಸುವದರಿಂದ ಬಹುಜನರು ಆ ತಡಸಲನ್ನು ನೋಡಲು ಹೋಗುವರು. ಜಗತ್ತಿನಲ್ಲಿ ಒಳ್ಳೆ ಸೊಬಗಿನ ಸಂಗತಿಗಳಲ್ಲಿ ಈ ತಡಸಲಿನ ಹೊಂದಿಕೆಯಾದುದರಿಂದ ಅದನ್ನು ಈ ಪಾಠದಲ್ಲಿ ವರ್ಣಿಸಿದೆ.

### ಶಬ್ದಾರ್ಥ ಪರಿಚಯ

| | |
|---|---|
| ಅಪರೂಪ= ಬಹಳ ಕಡಿಮೆ | ಪಸರಿಸಿದಂತೆ= ಹಬ್ಬಿದಂತೆ |
| ಪರ್ವತಾವಳಿ= ಗುಡ್ಡದಸಾಲು | ತುಷಾರ= ತುಂತುರಹನಿ |
| ಕಡಿದು= ಕಡವಾಡಿಯರೂಪ | ಪ್ರೇಕ್ಷಕರು= ನೋಡುವವರು |
| ಆಧಾರತಪ್ಪಿ= ಆಸರ ತಪ್ಪಿ | ಸರಳುಗಳು= ನೀರಿನ ಪ್ರವಾಹಗಳು |
| ಸಂಕುಚಿತ= ಇಟಕರಿ | ಧೂಮ್ರರಾಶಿ= ಹೊಗೆಯ ಗುಂಪು |
| ನಾಲಗೆಗಲ್ಲು=ಮುಂದೆಹಾಯ್ದ ಕಲ್ಲು | ಬಿಕ್ಕಟ್ಟಿನದು= ಕಠಿಣವಾದುದು |

### ಅಭ್ಯಸನಗಳಿಗೆ ಉತ್ತರ

೧ ಕಾನಡಾ ಜಿಲ್ಲೆಯ ಗೆರಸಪ್ಪೆಯ ಪೂರ್ವಕ್ಕೆ ೬ ಹರದಾರಿಯ ಮೇಲಿದೆ. ಅದಕ್ಕೆ ಕೋಡಕಣಿಯ ಜೋಗ ಎಂದು ಇನ್ನೊಂದು ಹೆಸರಿದೆ.

೨ ಮೈಸೂರ ಸೀಮೆಯಿಂದ ಹರಿದು ಬಂದ ಶರಾವತಿ ನದಿಯಿಂದ ಈ ತಡಸಲು ಉಂಟಾಗಿದೆ.

೩ ಈ ತಡಸಲಿನಲ್ಲಿ ರಾಜಾ, ಬಾಣ, ಅಬ್ಬರ, ಗೌರವನಿತೆ ಎಂಬ ನಾಲ್ಕು ತಡಸಲಿನ ಭಾಗಗಳಿವೆ. ಆ ಭಾಗಗಳಿಗೂ ತಡಸಲೆನ್ನುವರು.

೪ ತಡಸಲನ್ನು ನೋಡುವವರು ಪ್ರತಿವರ್ಷದ ಡಿಶಂಬರ ತಿಂಗಳಿನಲ್ಲಿ ನೋಡುವದು ಉತ್ತಮ ಯಾಕಂದರೆ ಆಗ ನದಿಗೆ ನೀರು ಬಹಳ ಹಾಗು ಬಹಳ ಕಡಿಮೆ ಇರುವದಿಲ್ಲ.

## ೨೨. ಒಳ್ಳೆಯ ಗೆಳೆಯ

ಒಳ್ಳೆಯವರ ಸಹವಾಸವಿರಬೇಕು. ಅಂಥವರ ಗೆಳೆತನದಿಂದ ತನಗೆ ಉಂಟಾಗುವ ಕಠಿಣ ಪ್ರಸಂಗಗಳಿಂದ ದೂರಾಗಬಹುದು. ಈ ಬಗ್ಗೆ ಈ ಪಾಠ ದಲ್ಲಿ ಒಂದು ಕಥೆ ಬರೆದಿದೆ. ಒಂದು ಪಾರಿವಾಳಕ್ಕೆ ಗುಡ್ಡದ ಇಲಿಯೊಂದರ ಗೆಳೆತನವಿತ್ತು. ಪಾರಿವಾಳವೂ ಅದರ ಹಿಂಡೂ ಒಂದುಸಾರೆ ಬೇಡನ ಬಲಿ ಯಲ್ಲಿ ಸಿಕ್ಕಾಗ ಇಲಿಯು ಅವು ಸಿಕ್ಕ ಬಲೆಯನ್ನು ಕತ್ತರಿಸಿ ಆವೆಲ್ಲ ಪಾರಿವಾಳ ಗಳನ್ನು ಪಾರುಮಾಡಿತು. ಇದೇ ಕತೆಯು.

### ಶಬ್ದ ಪರಿಚಯ

ಬೂರಲಮರ=ಅರಳೆಯನ್ನು ಹುಟ್ಟಿಸುವ ಒಂದು ದೊಡ್ಡ ಮರ

ದೇಶಾಂತರದಹಕ್ಕಿ=ಮತ್ತೊಂದು ದೇಶದಿಂದ ಬಂದ ಪಕ್ಷಿ

ಎಚ್ಚರಿಕೆ=ತಿಳಿವು

ಸಂಘಶಕ್ತಿ=ಬಹು ಜನರ ಕೂಡಿದ ಬಲ

ಇಲಿ ಬಿಲವು=ಇಲಿಯ ಹೋರು

ಬಿಡುಗಡೆಮಾಡು = ಪಾರುಮಾಡು

ಅವಸ್ಥೆ=ಪರಿಣಾಮ

ಸಂಗಡಿಗರು=ಸಂಗಡ ಇದ್ದವರು

ನೀಡಿತು=ಕೊಟ್ಟಿತು

ಉಪಕಾರ=ಎರಡನೆಯವರು ತನಗೆ ಮಾಡಿದ ಸಹಾಯ

ನೆನೆದವು=ಸ್ಮರಿಸಿದವು

### ಅಭ್ಯಸನೆಗಳಿಗೆ ಉತ್ತರ

(೧) ಬೇಟೆಗಾರನು ಬಲೆಹಾಕಿದ್ದನು. ಪಕ್ಷಿಗಳನ್ನು ಹಿಡಿಯುವ ದಕ್ಕಾಗಿ.

(೨) ಜನರು ಇಲ್ಲದ ಈ ಸ್ಥಳದಲ್ಲಿ ಅಕ್ಕೀಕಾಳು ಹೇಗೆ ಇಲ್ಲಿ ಬಿದ್ದ ವೆಂಬುದನ್ನು ನೀವೆಲ್ಲರು ವಿಚಾರಮಾಡಿರಿ ಎಂದು ಚಿತ್ರಗ್ರೀವವು ಹೇಳಿತು.

(೩) ಗುಡ್ಡದ ವಾರಿಯಲ್ಲಿದ್ದ ಹಿರಣ್ಯಕ ಇಲಿಯು ಹತ್ತರ ಬಂದವು.

(೪) ಇಲಿಯು ಪಾರಿವಾಳ ಸಿಕ್ಕ ಬಲೆಯನ್ನು ತನ್ನ ಹಲ್ಲಿನಿಂದ ಕಡಿದದ್ದರಿಂದ,

(೫) ಇಲ್ಲಿ ಒಳ್ಳೆಗೆಳೆಯನು ಇಲಿಯು, ಯಾಕಂದರೆ ಗೆಳೆಯನಕೂಡ ಒಳ್ಳೆ ಮಾತುಕಥೆಯಾಡುವದು, ಗೆಳೆಯನ ಹಿತಾಹಿತ ನೋಡುವದು, ಇವೆಲ್ಲ ಒಳ್ಳೆ ಗೆಳೆಯನ ಲಕ್ಷಣಗಳು

## ೨೩. ರೊದ್ದ ಶ್ರೀನಿವಾಸರಾಯರು

ತಮ್ಮ ಜೀವಮಾನದವರೆಗೂ ನಾಡಿನ ಬೆಳವಣಿಗೆಗಾಗಿ ದೇಹ ಸವಿಸಿದ ವರಲ್ಲಿ ರೊದ್ದ ಶ್ರೀನಿವಾಸರಾಯರೊಬ್ಬರಾಗಿದ್ದರು. 'ನಾಡಿಗಾಗಿ ನಾನು' ಎಂದು ನಾಡಸೇವೆಮಾಡಿದರು. ಇವರು ಶಿಕ್ಷಣ ಕ್ಷೇತ್ರದಲ್ಲಿ ಬಹುಕಾಲ ದುಡಿದರು ಕೆಲಸದಿಂದ ನಿವೃತ್ತರಾದ ಮೇಲೂ ಸ್ಥಾನಿಕ ಸಂಸ್ಥೆಗಳಲ್ಲಿ ಸೇರಿ ಹಾಗು ಮುಂಬೈ ಶಾಸನ ಸಭೆಯಲ್ಲಿ ಪ್ರವೇಶಿಸಿ ನಾಡಿನ ಬೆಳಿಗೆಗಾಗಿ ಪ್ರಯತ್ನ ಮಾಡಿದರು ಧಾರವಾಡದಲ್ಲಿ ಈಗಿರುವ ಕರ್ನಾಟಕ ಕಾಲೇಜದ ಸ್ಥಾಪನೆಯ ಮಹತ್ವದ ಕಾರ್ಯವು ಇವರದೇ ಆಗಿತ್ತು. ಇವರು ನಿಸ್ವಾರ್ಥಬುದ್ಧಿಯಿಂದ ಮಾಡಿದ ನಾಡಸೇವೆಗೆ ಸರಕಾರವು ಇವರಿಗೆ ದಿವಾನ ಬಹದ್ದೂರ ಹಾಗು ಸಿ. ಆಯ್. ಇ. ಎಂಬ ಬಹುಮಾನದ ಬಿರುದು ಪದವಿಗಳನ್ನು ಕೊಟ್ಟಿತ್ತು. ಈ ಮಹಾ ಮಹಿಮನ ಅಲ್ಪ ಪರಿಚಯವು ಈ ಪಾಠದಲ್ಲಿ ಬರೆದಿದೆ.

### ಶಬ್ದಾರ್ಥ ಪರಿಚಯ

ಗಂಭೀರಮುಖ= ಪೌರುಷವನ್ನು ಬೀರುವ ಮುಖ

ತೀಕ್ಷ್ಣ= ಚುರುಕು

ಮಿಕ್ಕಿಹೋಗು= ಮೀರಿಹೋಗು

ಬಾಳುವೆ= ಸಂಸಾರ

ಬಹು ವಿರಳ= ಬಹಳಕಡಿಮೆ

ಜ್ಞಾನವಂತ= ಬುದ್ಧಿಯುಳ್ಳವ

ತೀರ್ಗಡೆಹೊಂದು= ಪಾಸಾಗು

ಅಡಚಣಿ= ತೊಂದರೆ

ವಾತ್ಸಲ್ಯ=ಚಿಕ್ಕವರಮೇಲಿನ ಪ್ರೀತಿ

ಮುಂದಾಳು=ಜನರಲ್ಲಿ ಮುಂದಾಗಿ ಕೆಲಸ ಮಾಡುವವ

ದಿವಂಗತ= ಮೃತವಾದ

ಧೋರಣ = ಮುಂದಾಗುವದನ್ನು ಅಂದಾಜುಕಟ್ಟುವದು
ಆಯುಷ್ಯ = ಜೀವಮಾನ
ದಕ್ಷತೆ = ಮನಸುಗೊಟ್ಟು ಕೆಲಸ ಮಾಡುವದು
ಪದವಿ = ಕಿತಾಬು

## ಅಭ್ಯಸನೆಗಳಿಗೆ ಉತ್ತರ

೧ ರೊದ್ದರಾಯರು ಗಂಭೀರ ಮುದ್ರೆಯುವರೂ ಭವ್ಯರೂ ಆಗಿದ್ದರು.

೨ ತನ್ನ ಬಾಳುವೆಗೆ ವಿಶೇಷಲಕ್ಷ್ಯಕೊಡದೆ ನಾಡಿನ ಸೇವೆಗಾಗಿ ದುಡಿಯುವದೇ 'ನಾಡಿಗಾಗಿ ನಾನು' ಎನ್ನಿಸುವದು.

೩ ದೂರಿನ ಊರಿಗೆ ಹೋಗಿ ಕಲಿಯಬೇಕಾಯಿತು. ಪರೀಕ್ಷೆಗಾಗಿ ಧಾರವಾಡದಿಂದ ಪುಣೆಗೆ ೩೦೦ ಮೈಲು ಕಾಲ್ನಡಿಗೆಯಿಂದ ಹೋಗಿದ್ದರು.

೪ ಮನೆತನದ ಅಡಚಣೆಗಾಗಿ ಮುಂದೆ ಶಿಕ್ಷಣಸಾಗದಾಯಿತು.

೫ ಶಿಕ್ಷಣ ಸಂಸ್ಥೆ ಬಲಿಸಿದರು. ಕರ್ನಾಟಕ ಕಾಲೇಜು ಸ್ಥಾಪಿಸಿದರು.

೬ ಪೆನಶನ್ ಪಡೆದನಂತರ ಡಿ. ಎಲ್. ಬಿ. ಅಧ್ಯಕ್ಷರಾದರು. ಮು. ಪಾಲಟಿಯ ಅಧ್ಯಕ್ಷರಾದರು, ಮುಂಬಯಿ ಶಾಸನಸಭೆಯ ಸದಸ್ಯರಾಗಿದ್ದರು. ಧಾರವಾಡ ನಗರ ಆನರರಿ ಮ್ಯಾಜಿಸ್ಟ್ರೇಟರಾಗಿದ್ದರು.

೭ (ಅ) ಆದರೆ **ನಾಡಿಗಾಗಿ ನಾನು** ಎಂದು ನಾಡಿನ ಸೇವೆ ಮಾಡುವವರು ವಿರಳ.

(ಆ) ತಾಯಿ ಸುಬ್ಬಮ್ಮನವರು ಬಹಳ **ಧೋರಣೆಯುಳ್ಳವರು.**

(ಇ) ರೊದ್ದರಾಯರು **ಸೇವಾನಿವೃತ್ತರಾಗಿ** ಮುಂಬಯಿ ಇಲಾಖೆಯ **ಶಾಸನ** ಸಭೆಯ ಸದಸ್ಯರಾದರು.

(ಈ) ಕರ್ನಾಟಕ ಕಾಲೇಜ ಸ್ಥಾಪನೆಯ ಕೆಲಸದಲ್ಲಿ ಇವರಿಬ್ಬರು **ಕನ್ನಡ** ಮಾತೆಯ ಎರಡು **ತೋಳುಗಳೆಂದು** ಹೇಳಬಹುದು.

(ಉ) ಅರವತ್ತು ವರ್ಷಕ್ಕೆ 'ಅರವು-ಮರವು' ಆಗುವದು.

# ೨೪. ಕುಮಾರಿ ಮಿಸ್ ಫ್ಲಾರೆನ್ಸ ನಾಯಟಿಂಗೇಲ

ಕೇವಲ ಪರೋಪಕಾರದಿಂದ ಜನಹಿತದ ಸಲುವಾಗಿ ಸೇವೆ ಮಾಡಿದ ಹೆಣ್ಣುಮಗಳಿವಳು. ಹೆಂಗಸರಿಂದಲೇ ಪರೋಪಕಾರದ ಕೆಲಸಗಳು ಹೆಚ್ಚು

ಕೊನೆಗೊಳ್ಳುವವೆಂದು ಈಕೆಯ ಭಾವನೆ. ಅದಕ್ಕೆ ಸರಿಯಾಗಿ ರೋಗಿಗಳ ಶುಶ್ರೂಷೆಗಾಗಿಸ್ತ್ರೀದಾಯಿಗಳನ್ನು ಸಿದ್ಧ ಮಾಡುವದರಲ್ಲಿ ಪ್ರಯತ್ನ ಪಟ್ಟಳು. ರೋಗಿಗಳ ಆರೈಕೆಯ ಕುರಿತು ಕೈಕೊಳ್ಳುವ ಉಪಾಯಗಳಿಗಾಗಿ ತಾನು ಶಿಕ್ಷಣ ಪಡೆದು ದಾಯಿಗಳಿಗೂ ಅಂಥ ಶಿಕ್ಷಣ ದೊರೆಯುವ ವ್ಯವಸ್ಥೆ ಮಾಡಿದಳು. ಯುದ್ಧದಲ್ಲಿ ಗಾಯಾಳುಗಳು ಪಿಡುಗಿನ ಬೇನೆಗಳಿಗೆ ಸಿಕ್ಕವರು ಬಹುಜನರು ಇವಳ ಪ್ರಯತ್ನದಿಂದ ಸಿದ್ಧವಾದ ಶುಶ್ರೂಷಾ ಪಥಕದವರಿಂದ ಬದುಕಿಕೊಂಡರು. ಫ್ಲಾರೆನ್ಸಳು ಸ್ವತಃ ಶ್ರೀಮಂತಳು. ಸ್ವಾರ್ಥವೇನೊಂದಿಲ್ಲದೆ ಈ ಕಾರ್ಯ ಮಾಡಿ ಜನತೆಯಿಂದ, ಸರಕಾರದಿಂದ ಮನ್ನಣೆ ಪಡೆದಳು. ಸ್ತ್ರೀಯರ ಉನ್ನತಿಗಾಗಿ ಸದಾ ಪರಿಶ್ರಮ ವಹಿಸಿದ್ದಳು. ಇಂಥ ಸ್ತ್ರೀರತ್ನದ ಚರಿತ್ರೆ ಈ ಪಾಠದಲ್ಲಿದೆ.

## ಶಬ್ದಾರ್ಥಗಳ ಪರಿಚಯ

ಕುಮಾರಿ = ಲಗ್ನವಾಗದವಳು
ಸಾಧ್ಯ = ಕೈಗೂಡುವಿಕೆ
ಸ್ತ್ರೀಜನಾಂಗ = ಸ್ತ್ರೀಯರ ಒಂದು ಸಮಾಜ
ವಿಶಿಷ್ಟ = ಹೆಚ್ಚಿನ
ಪವಿತ್ರ ಕರ್ತವ್ಯ = ಪುಣ್ಯ ಕರ್ಮ
ಪರಿಶ್ರಮ = ಬಹಳದುಡಿತ
ಗುಣಶೀಲ ಸಂಪನ್ನೆ = ಒಳ್ಳೇ ಗುಣ ಆಚರಣೆಗಳಿಂದ ಕೂಡಿದಾಕೆ
ಆಗರ್ಭ = ಹುಟ್ಟುವಮೊದಲಿಂದ
ಮಹಿಳೆ = ಹೆಂಗಸು
ಕೋಮಲ = ಮೃದು (ಎಳೆ)

ಕನಿಕರ = ದಯ
ದವಾಖಾನೆ = ಆಸ್ಪತ್ರೆ
ವಿಧಾನವನ್ನು = ಕ್ರಮವನ್ನು
ಘೋರಸಂಗ್ರಾಮ=ದೊಡ್ಡ ಕಾಳಗ
ಜಲಸಮಾಧಿ = ನೀರಿನಲ್ಲಿ ಮುಳುಗುವದು
ವಿಶ್ರಾಂತಿ = ಆರಾಮು
ಪ್ರತಿಫಲ = ದುಡಿತಕ್ಕೆ ಕೊಡುವ ಉತ್ತೇಜನ
ಪಾರಿತೋಷಕ = ಇನಾಮು
ಅರ್ಪಣ = ಒಪ್ಪಿಸು (ಕೊಡು)
ನಿಧಿ = ಹೂಳಿದದ್ರವ್ಯ

## ಅಭ್ಯಸನಗಳಿಗೆ ಉತ್ತರ

೧ ರೋಗಿಗಳ ಶುಶ್ರೂಷಾ ಮಾಡುವದನ್ನು ಕಲಿತಳು.
೨ ತನ್ನ ಇಂಗ್ಲಂಡದಲ್ಲಿಯಲ್ಲದೆ ಜರ್ಮನಿಗೆ ಹೋಗಿ ಶಿಕ್ಷಣ ಪಡೆದಳು.

೩ ಯುದ್ಧದ ಪ್ರಸಂಗ, ಸಿಡುಗಗಳೆದ್ದಾಗ, ಅಪಘಾತದ ಪ್ರಸಂಗ ದಲ್ಲಿ ನಾಯ್‌ಟಿಂಗೇಲಳ ಪ್ರಯತ್ನ ಕಂಡುಬರುತ್ತದೆ.

೪ ಇಂಗ್ಲಂಡದ ಜನತೆಯು ಸ್ವಾಗತ ಸಮಾರಂಭಮಾಡಿತು. ವ್ಹಿಕ್ಟೋರಿಯಾರಾಣಿಯು ಒಂದು ಉಂಗುರವಿತ್ತಳು. ಅಲ್ಲದೆ ಸಾರ್ವ ಜನಿಕ ಪಾರಿತೋಷಕದ ೫ ಲಕ್ಷ ರೂ. ಗಳು ದೊರೆತವು.

೫ ನಾಯ್‌ಟಿಂಗೇಲಳು ಸ್ತ್ರೀಯರ ಉನ್ನತಿಗಾಗಿ ಹೆಚ್ಚು ಪ್ರಯತ್ನಿ ಸಿದಳು.

೬ ಯುದ್ಧದಲ್ಲಿ ಗಾಯಾಳುಗಳ ನಿರೀಕ್ಷಣೆಯನ್ನು ರಾತ್ರಿಯಿದ್ದರೂ ಕೂಡ ಕೈಯಲ್ಲಿ ದೀಪಹಿಡಿದುಕೊಂಡು ಮಾಡುತ್ತಿದ್ದಳು. ಅದರಿಂದ ಇವಳಿಗೆ ಬೆಳಕಿನ ಮಹಿಳೆ ಎಂದು ಕರೆಯುತ್ತಿದ್ದರು.

೭ ಪರೋಪಕಾರ, ನಿಸ್ವಾರ್ಥಸೇವೆ, ಮಮತೆ ಮೊದಲಾದ ಸದ್ಗುಣ ಗಳಾಕೆಯಲ್ಲಿ ಇದ್ದವು.

೮ ಒಡೆಯನಿಗೆ ಅಹಿತ ಬಯಸುವವನ ಸೇವಾಬುದ್ಧಿಯು ಕೃತಕ ವಿರುವದು.

ತಾಯಿಗಳು ಹಸುಮಕ್ಕಳ ಆರೈಕೆಗೆ ಲಕ್ಷಕೊಡುವರು.ರಾಮನು ದಿನವೂ ಅವಿಶ್ರಾಂತವಾಗಿ ದುಡಿದನು.

ಕಾಲಿನ ನೋವಿನಿಂದ ನಮ್ಮ ನಾಯಿಯು ಒರಲಿತು.

ಪಾಪಿಯ ಮರಣಕ್ಕೆ ಕನಿಕರಬಡುವವರಾರು?

ಜೀವನ ಸಂಗ್ರಾಮವನ್ನೆದುರಿಸಿ ಜಯಪಡೆದವನೇ ಯೋಗಿ.

ಆಹಾರ ಸಾಮಗ್ರಿಗಳು ಸರಿಯಾಗಿ ದೊರೆಯವು.

ರೋಗದಿಂದ ಬಳಲುವವನ ಶುಶ್ರೂಷೆಯಲ್ಲಿ ಹೆಚ್ಚು ಕಡಿಮೆ ಯಾಗ ಕೂಡದು.

---

## ೨೫. ಮದಿರಾ ರಾಕ್ಷಸ

ಭೀಮಪ್ಪನೆಂಬ ಒಬ್ಬ ಸ್ಥಿತಿವಂತ ರೈತನು ತನ್ನ ಮಕ್ಕಳಿಗೆ ಮನೆಯಲ್ಲಿ ಓದು ಹೇಳುವದಕ್ಕಾಗಿ ಒಬ್ಬ ಗುರುವನ್ನು ಗೊತ್ತುಮಾಡಿದ್ದನು. ಆ ಶಿಕ್ಷಕನು ಹುಡುಗರಿಗೆ ಕೇವಲ ಓದು-ಬರೆಹಗಳನ್ನಷ್ಟೇ ಕಲಿಸದೆ ಅವರನ್ನು ನೀತಿವಂತರನ್ನಾಗಿ ಮಾಡುವ ಕುರಿತು ತನ್ನ ಜಾಣತನದಿಂದ ಹಲವು ಕಥೆ

ಗಳನ್ನು ಕಲ್ಪಿಸಿ ಅವುಗಳ ಮುಖಾಂತರ ಬೋಧೆಮಾಡುತ್ತಿದ್ದನು. ಒಂದು ದಿನ ಆ ಶಿಕ್ಷಕನು 'ಸೆರೆ-ಸಿಂದಿಗಳನ್ನು ಕುಡಿಯಬಾರದು' ಎಂಬದರಮೇಲೆ ಮದ್ರದೇಶದ ಮಧುವರಸ ಮಂತ್ರಿಯು ಕಥೆಯೊಂದನ್ನು ರಚಿಸಿ ಹೇಳಿದ ಕಥೆಯು ಈ ಪಾಠದಲ್ಲಿದೆ. ಕಥೆಯು ಕಲ್ಪಿತವಿದ್ದರೂ ಕೇಳುವವರ ಮನಸ್ಸಿನಮೇಲೆ ಒಳ್ಳೆ ಪರಿಣಾಮವನ್ನುಂಟು ಮಾಡುವಂತಹದಿದೆ.

## ಶಬ್ದಗಳ ಪರಿಚಯ

ಸ್ಥಿತಿವಂತ= ಇದ್ದುಳ್ಳವ
ಕಮತ= ಒಕ್ಕಲತನ
ಚಟ= ವ್ಯಸನ
ಬೋಧಮಾಡು=ಉಪದೇಶಮಾಡು
ಬಗೆಯಿಂದ= ರೀತಿಯಿಂದ
ಖ್ಯಾತಿವಂತ= ಪ್ರಸಿದ್ಧನಾದವ
ಪ್ರಯೋಗಿಸು= ಮಾಡಿನೋಡು
ಕುತೂಹಲ= ಉತ್ಸುಕತೆ
ಪೇಯ= ಕುಡಿಯುವಂಥದ್ದು
ಉನ್ಮತ್ತ= ಭ್ರಾಂತ
ಮಂತ್ರಿ= ಪ್ರಧಾನಿ
ಮಾಯಾಶಕ್ತಿ= ಮಾಟಗಾರಿಕೆ
ಬಲೆಯಲ್ಲಿ= ಜಾಲದಲ್ಲಿ
ಓಲಗ= ಸಭೆ
ಪರಿವೆ= ಎಚ್ಚರ
ಮಧುರಧ್ವನಿ= ಸವಿಕಟ್ಟಾದಸ್ವರ
ಸೋಜಿಗ= ಆಶ್ಚರ್ಯ
ಅವಸ್ಥೆ = ಗತಿ
ಅಸಹ್ಯಪಡು= ಹೇಸಿಕೊಳ್ಳು
ಮದಿರಾ= ಸರಾಯಿ
ಮದಾಂಧ= ಒಳ್ಳೆ ಸೊಕ್ಕಿನ
ಪ್ರಭಾವ= ಮಹತ್ವ
ಮದ್ಯಪಾನ= ಸೆರೆಕುಡಿಯುವಿಕೆ

## ಅಭ್ಯಸನಗಳಿಗೆ ಉತ್ತರ

೧ ಸೆರೆ-ಸಿಂದಿ ಕುಡಿಯುವ ಕೆಟ್ಟ ಚಟದಬಗ್ಗೆ, ಕಥೆ ನೆನಪಾಯಿತು.

೨ ಆ ರಾಜ್ಯದಲ್ಲಿಯ ಹಲವು ಹಳ್ಳಿ-ಶಹರಗಳ ಬಹು ಜನರೂ, ಸುಶಿಕ್ಷಿತರೂ, ಅಶಿಕ್ಷಿತರೂ, ಬಡವರೂ, ಸಿರಿವಂತರೂ, ಹಿರಿ-ಕಿರಿಯರೂ ಎಲ್ಲರೂ ಮೆಚ್ಚಿದರು.

೩ ಮೊದಲನೇ ಸಾರೆ ಸಿಂಹವನ್ನೂ, ೨ನೇ ಸಾರೆ ನವಿಲನ್ನೂ ೩ನೇ ಸಾರೆ ಕತ್ತೆಯನ್ನೂ ಕೊನೆಯ ಸಾರೆ ಹಂದಿಯನ್ನೂ ತರಿಸಿದನು.

೪ ಮಾಟಗಾರನು ಪ್ರಧಾನಿಗೆ ಸೆರೆ ಗುಟುಕು ಕುಡಿಸಿ ತೋರಿಸಿದನು.

೫ ಸೆರೆಕುಡುಕರು ಕ್ರೂರರಾಗುವರು, ಕೆಟ್ಟ ಆಚರಣೆಯುವರಾಗುವರು. ಮದಾಂಧರಾಗುವರು. ಆದರಂತೆ ಮೂರ್ಖರೂ ಮಾನರಹಿತರೂ ಆಗುವರು. ಇವುಗಳಿಂದ ಮದಿರಾ ರಾಕ್ಷಸನ ಪ್ರಭಾವವು ತೋರಿಬಂತು.

೬ ದೇವೇಂದ್ರನ ಓಲಗವು ಸುರರಿಂದ ಕಿಕ್ಕಿರಿದಿತ್ತು.

ಗಾರುಡಿಗೆ ಮೋಡಿಕಾರನೆಂಬ ಹೆಸರುಂಟು.

ಹುಮಾಯೂನನು ತನ್ನ ಮಗನು ಖ್ಯಾತಿವಂತನಾಗುವನೆಂದು ಅರಿತನು.

ಬಹಳ ಮಾತಾಡುವವರು ಮಾತಿನಲ್ಲಿ ಎಚ್ಚರದಿಂದ ಶಬ್ದ ಪ್ರಯೋಗ ಮಾಡಬೇಕು.

ಸದ್ಯಕ್ಕೆ ಚಹವು ಮಾನ್ಯವಾದ ಪೇಯವಾಗಿದೆ.

ಸ್ತ್ರೀಯರಲ್ಲಿಯ ಚಲನವಲನದಲ್ಲಿ ಒನಪು ಒಂದಾಗಿದೆ.

ಬುಕ್ಕರಾಜನು ಮದಾಂಧನಾದ ಬಾಮನಿ ಸುಲ್ತಾನನ ಹುಂಡಿಯನ್ನು ಕಡೆಗಣಿಸಿದನು.

---

# ೨೬. ಸರ್ವಜ್ಞನ ವಚನಗಳು

## (ಕವಿತೆ)

ಸರ್ವಜ್ಞನೆಂಬ ಕವಿಯು ತನ್ನ ಕಾವ್ಯಶಕ್ತಿಯಿಂದ ಕವಿತೆಗಳನ್ನು ರಚಿಸಿ ಜನತೆಗೆ ನೀತಿಬೋಧಕವಾದ ಉಪದೇಶಗಳನ್ನು ಮಾಡಿರುವನು. ಅವನ ಕವಿತೆಗಳಲ್ಲಿಯ ಆರು ಕವಿತೆಗಳು ಈ ಪಾಠದಲ್ಲಿ ಬಂದಿವೆ.

### ಕಠಿಣ ಶಬ್ದದ ಅರ್ಥಗಳು

| | |
|---|---|
| **ಹುತ್ತು** = ಹಾವಿನ ಹೋರು, ಬಿಲ | ದಾನ = ಕೊಡುವದು |
| **ಸತ್ತಿಗೆ** = ವೈಭವಸೂಚಕವಾದ ರಾಜ ಛತ್ರವು | ಮೇಲು = ಹೆಚ್ಚಿನದು |
| **ಪರಿಣಾಮ** = ಒಳ್ಳೆಗತಿ (ಮೋಕ್ಷ) | ಬಚ್ಚಿಟ್ಟ = ಮರೆಯಾಗಿ ಇಟ್ಟ |
| **ಪದ** = ಒಳ್ಳೆಸ್ಥಾನ (ಕೈಲಾಸ) | ಹಾಲೋಗರ = ಹಾಲೂ ಅನ್ನ |
| **ನೆರೆಮನೆ** = ಹತ್ತರವಿದ್ದ ಮನೆ | ಸಾಲಿಗ = ಸಾಲ ಕೊಟ್ಟವ |
| **ಕಿಬ್ಬದಿ** = ಕಿಪ್ಪೊಟ್ಟೆ | ಸಂಗ = ಗೆಳೆತನ |
| **ಕೀಲು** = ಎಲುವು | ಕೆಸರು = ರಾಡಿ |

## ಸರಳ ಅರ್ಥ

೧ ಹಾವಿಗೆ ಹುತ್ತವು, ಕೊರಳಿಗೆ ಮುತ್ತಿನಹಾರವು, ರಾಜನಿಗೆ ಛತ್ರವು ಶೋಭೆಯನ್ನುಂಟುಮಾಡುವವು. ಆದರಂತೆ ಜನರಿಗೆ ಸತ್ಯವಚನವು ಶೋಭೆಯನ್ನುಂಟುಮಾಡುವದು.

೨ ದೇವರು ನಿನಗೆ ಐಶ್ವರ್ಯವನ್ನು ನೀಡಿದ ಕಾಲದಲ್ಲಿ ಧರ್ಮವನ್ನು ಸಂಪಾದಿಸು. ಆದರಿಂದ ನಿನಗೆ ಮೋಕ್ಷವು ಪ್ರಾಪ್ತವಾಗುವದಲ್ಲದೆ ಉತ್ತಮ ಪದವಿ ಪ್ರಾಪ್ತವಾಗುವದು. ಅಂದರೆ ಕೈಲಾಸವು ಸುಲಭವಾಗಿ ದೊರಕುವದು.

೩ ಎಲ್ಲ ದಾನಗಳಲ್ಲಿ ಅನ್ನದಾನವು ಹೆಚ್ಚಿನದು; ಯಾಕೆಂದರೆ ಅನ್ನದಿಂದ ಪ್ರಾಣರಕ್ಷಣೆಯಾಗುವದು

೪ ತಾನು ಸಂಪಾದಿಸಿದ ಸಂಪತ್ತನ್ನು ತಾನು ಉಪಭೋಗಿಸದೆ, ಅನ್ಯರಿಗೆ ಕೊಡದೆ ನೆಲದಲ್ಲಿ ಹೂಳಿಟ್ಟವನ ಬಾಯಲ್ಲಿ ಮಣ್ಣು ಬಿದ್ದಂತಾಗುವದು.

೫ ಅನ್ಯರಿಂದ ಸಾಲ ತೆಗೆದುಕೊಳ್ಳುವಾಗ ಬಲು ಸೊಗಸು. ಆದರೆ ಸಾಲಕೊಟ್ಟವನು ಬಂದು ತಾನು ಕೊಟ್ಟ ಹಣವನ್ನು ಕೇಳಲು ತಿರುಗಿ ಕೊಟ್ಟಿಸುವದು ಬಲು ದುಸ್ತರವೆನ್ನಿಸುವದು.

೬ ಕೆಟ್ಟ ಜನರು ಇದ್ದ ಸ್ಥಾನ, ಕಳ್ಳನ ಸ್ನೇಹ, ತಗಲಾಡುವವನ ಮಾತು ಇವು ಮೂರೂ ಕೆಸರಿನಲ್ಲಿ ಮುಳ್ಳು ತುಳಿದಂತೆ ತಾಪದಾಯಕರವು.

## ಅಭ್ಯಸನಗಳಿಗೆ ಉತ್ತರ

೧ ಲೋಕಕ್ಕೆ ಅಂದರೆ ಜನರಿಗೆ ಸತ್ಯ ನುಡಿಯುವದು ಭೂಷಣವು.

೨ ಎಲ್ಲ ದಾನಗಳಲ್ಲಿ ಅನ್ನ ದಾನವೇ ಹೆಚ್ಚಿನದು.

೩ ಧನವನ್ನು ಗಳಿಸಿಯೂ ಗಳಿಸದಂತೆ ಆಗುವದು. ಅಂದರೆ ಅವನ ಬಾಯಿಯಲ್ಲಿ ಮಣ್ಣು ತುಂಬಿದಂತಾಗುವದು.

೪ ಸಜ್ಜನರಿಲ್ಲದ ಊರು, ಕಳ್ಳನ ಗೆಳೆತನ; ಅಸತ್ಯ ನುಡಿಯುವವನ ಮಾತು. ಇವು ಮೂರು ಸಂಗತಿಗಳು ಕೆಸರಿನಲ್ಲಿಯ ಮುಳ್ಳು ತುಳಿದಂತೆ ತಾಪದಾಯಕವಾದವುಗಳು.

# ೨೭. ವಿಜ್ಞಾನಿ ಥಾಮಸ್ ಎಡಿಸನ್

ಇವನೊಬ್ಬ ಜಗದ್ವಿಖ್ಯಾತನಾದ ಶಾಸ್ತ್ರಜ್ಞನು. ಅಮೇರಿಕೆ ಖಂಡದ ಮಿಲನ ನಗರವು ಇವನ ಜನ್ಮಸ್ಥಳವು. ಬಡತನದ ಮನೆತನದಲ್ಲಿ ಹುಟ್ಟಿ ಅಷ್ಟೊಂದು ಶಾಲೆಯನ್ನು ಕಲಿಯಲಿಲ್ಲ. ಇವನದು ಕೇವಲ ಶೋಧಕದೃಷ್ಟಿ. ಈಗ ಬಳಕೆಯಲ್ಲಿರುವ ಗ್ರಾಮಫೋನ್, ವಿದ್ಯುದ್ದೀಪ, ಚಲನಚಿತ್ರ ಮೊದಲಾದವನ್ನು ನೋಡಿದವರಿಗೆ ಕೌತುಕ ಹುಟ್ಟಿಸುವಂಥ ಎಲ್ಲ ಯಂತ್ರಗಳು ಇವನ ಶೋಧದ ಮೂಲಕವಾಗಿಯೇ ನಾವು ಕಾಣುವೆವು. ಶೋಧಕ್ಕಾಗಿ ಸುಮಾರು ೫೦ ಸಾವಿರ ಪ್ರಯೋಗಗಳನ್ನು ಮಾಡಿದನು. ಸಾವಿರಾರು ಪುಸ್ತಕಗಳಾಗುವಷ್ಟು ಇವನು ಮಾಡಿದ ಶೋಧಗಳ ಟಿಪ್ಪಣಿಗಳಿವೆ.

ಇವನ ಕರ್ತೃತ್ವವೂ, ಉದ್ಯೋಗ ಪ್ರಿಯತೆಯೂ, ಶಾಂತತೆಯೂ ಹೊಗಳತಕ್ಕಂಥಹವಿದ್ದವು. ಮೊನ್ನೆ ಮೊನ್ನೆ ಅಂದರೆ ೧೯೩೧ರಲ್ಲಿ ತೀರಿದನು.

ಜಗತ್ತಿಗೆ ತನ್ನ ಶೋಧಗಳಿಂದ ಉಪಕಾರಮಾಡಿದ ಈ ಎಡಿಸನನ ಚರಿತ್ರೆಯು ಈ ಪಾಠದಲ್ಲಿ ಬರೆದಿದೆ.

## ಕಠಿಣ ಶಬ್ದಗಳ ಅರ್ಥಗಳು

ಮಿನುಗುವ = ಹೊಳೆಯುವ
ಚಿಕ್ಕೆ = ತಾರೆ, ನಕ್ಷತ್ರ
ವಿಜ್ಞಾನ = ಯಾವದೊಂದರ ತಿಳುವಳಿಕೆ
ಸಲಕರಣೆ = ಕೆಲಸಮಾಡಲು ಬೇಕಾಗುವ ಸಾಧನ
ಅನಾಹುತ = ದೊಡ್ಡ ಗಂಡಾಂತರ
ಅನುವು = ಸ್ಥಾನ
ಪ್ರಸಂಗ = ವೇಳೆ
ಸಂಚಾಲಕ=ಮುಂದೆ ನಡಿಸುವವ
ಸ್ವೀಕರಿಸುವದು = ತಕ್ಕೊಳ್ಳುವದು
ವಿಲಾಸ = ತನ್ನ ಮನಸನ್ನು ತೃಪ್ತಿಪಡಿಸಿಕೊಳ್ಳುವದು
ಜಗತ್ಪ್ರಸಿದ್ಧ = ಲೋಕಕ್ಕೆ ಹೆಸರಾದ
ಬುಡ್ಡಿ = ಬುರುಡೆ (ಗುಳ್ಳೆ) ಯ ಆಕಾರದ್ದು
ಅಡಕವಾದ = ಸೇರಿಕೊಂಡ
ಚಲನ = ಹೊಯ್ದಾಡು, ಅಲ್ಲಾಡು
ಕರ್ತೃತ್ವಶಾಲಿ = ಮಾಡುವಿಕೆಯಲ್ಲಿ ಬಲ್ಲಿದ
ತಾಳ್ಮೆ = ಶಾಂತಗುಣ
ಜೀವನ = ಬದುಕುವಿಕೆ
ಅಗ್ರಗಣ್ಯನು = ಹೆಚ್ಚಿನವನು

### ಅಭ್ಯಸನಗಳಿಗೆ ಉತ್ತರ

೧ ಶಾಸ್ತ್ರೀಯ ವಿಜ್ಞಾನದ ಶೋಧ ಹಾಗು ಪ್ರಯೋಗಗಳಿಂದ ತನ್ನ ವಿದ್ಯೆಯನ್ನು ಸಂಪಾದಿಸಿದನು.

೨ ಹನ್ನೆರಡು ವರ್ಷದವನಿದ್ದಾಗ ಇವನು ಮಾಡುತ್ತಿದ್ದ ಪ್ರಯೋಗವು ಯಶಸ್ವಿಯಾಗದೆ ರೇಲುಬಂಡಿಗೆ ಧಕ್ಕೆಯುಂಟುಮಾಡಿ ರೇಲ್ವೆಯ ಮುಖ್ಯಸ್ಥನಿಂದ ಕಪಾಳಿಗೆ ಏಟು ಬಿತ್ತು; ಆದರಿಂದ ಆತನು ಕಿವುಡನಾದನು.

೩ ಗ್ರಾಮಫೋನ, ಚಲನಚಿತ್ರ, ವಿದ್ಯುಚ್ಛಕ್ತಿ ಇತ್ಯಾದಿ ಶೋಧಗಳನ್ನು ಎಡಿಸನನೇ ಗೊತ್ತುಹಚ್ಚಿದನು.

---

## ೨೮. ಕಳ್ಳರನ್ನು ಮೋಸಗೊಳಿಸಿದ್ದು

ತೆನ್ನಾಲಿ ರಾಮಯ್ಯನೆಂಬ ವಿನೋದಗಾರನು ವಿಜಯನಗರದ ಕೃಷ್ಣದೇವರಾಯನ ಆಳಿಕೆಯಲ್ಲಿದ್ದನು. ತನ್ನಲ್ಲಿಯ ಬುದ್ಧಿ ಕೌಶಲ್ಯದಿಂದ ಅವನು ಹಲವು ಹಾಸ್ಯವನ್ನುಂಟುಮಾಡುವ ವಿನೋದ ಬೆರೆತ ಕ್ರಿಯೆಗಳನ್ನು ಮಾಡುತ್ತಿದ್ದನು. ಅರಸನಿಂದ ಮೊದಲಾಗಿ ಕೀಳನವರೆಗೂ ಅವರಿವರೆನ್ನದೆ ತಾನು ವಿನೋದ-ಹಾಸ್ಯ ಸಾಗಿಸುತ್ತಿದ್ದನು. ಅವನೇ ಒಂದಾನೊಂದು ದಿನ ತನ್ನ ಮನೆಸೇರಿದ ಕಳ್ಳರನ್ನು ಹೇಗೆ ಮೋಸಗೊಳಿಸಿದನೆಂಬ ಕಥೆಯು ಈ ಪಾಠನಲ್ಲಿ ಬರೆದಿದೆ.

### ಕಠಿಣ ಶಬ್ದಗಳ ಅರ್ಥ

ಮೋಸಗೊಳಿಸು = ವಂಚಿಸು
ಧನವಂತ = ದುಡ್ಡಿದ್ದವ
ಸಂಚು = ಯುಕ್ತಿ (ಬೇತು)
ಸುಳುವು = ಅದೃಶ್ಯವಾಗಿ ತೋರುವದು
ಅಪಹರಿಸು = ತಕ್ಕೊಳ್ಳು
ಉಪದ್ರವ = ಕಾಟ
ಕಣ್ಣು ಚಿವುಟಿ = ಸನ್ನೆಮಾಡಿ
ನಗೆಗೇಡು = ಹಾಸ್ಯಾಸ್ಪದ
ಟೊಂಕಕಟ್ಟು = ಸಿದ್ಧನಾಗು
ಅಗಳಿ = ಕದವನ್ನು ತಡೆಯುವ ದಕ್ಕೆ ಬಾಗಿಲಕ್ಕೆ ಹಚ್ಚಿದ ಕಟ್ಟಿಗೆ
ಯಾತ = ಕಪ್ಪಲಿ (ತೊಗಲಿನದು)
ಸಮ್ಮತಿಸು = ಒಪ್ಪಿಕೊಳ್ಳು
ಅರ್ಧರಾತ್ರಿ = ಸರಿರಾತ್ರಿ
ಆಳು = ಮೂರುವರೆ ಮೊಳದ ಪ್ರಮಾಣ
ವ್ಯರ್ಥ = ಉಪಯೋಗವಿಲ್ಲದ್ದು
ಪುಣ್ಯವಂತ = ಒಳ್ಳೆಕೆಲಸ ಮಾಡುವವ
ಗಾಬರಿಯಾಗು = ಅಂಜು

## ಅಭ್ಯಸನಗಳ ಉತ್ತರಗಳು

೧ ತೆನ್ನಾಲ ರಾಮಕೃಷ್ಣನು ಶ್ರೀಮಂತನೆಂದೂ ಅವನ ಸಂಪತ್ತನ್ನು ಅಪಹರಿಸಬೇಕೆಂದೂ ಕಳ್ಳರು ಅವನ ಮನೆಯಲ್ಲಿ ಸೇರಿ ಅಡಗಿಕೊಂಡ ಕುಳಿತಿದ್ದರು.

೨ ರಾಮಕೃಷ್ಣನು ಕಪಟದ ಯುಕ್ತಿಯಿಂದ ಕಳ್ಳರನ್ನು ಠಕ್ಕಿಸಿದನು

೩ ಬಾವಿಯಲ್ಲಿ ನೀರು ಬಹಳವಿದ್ದುದನ್ನು ಕಂಡು ಚಿಂತಿಸಿದರು.

೪ ಸರತಿಯ ಮೇಲಿಂದ ಯಾತ ಹೊಡೆದು ನೀರು ಕಡಿಮೆಮಾಡ ಬೇಕೆಂಬ ಉಪಾಯವನ್ನು ಕೈಕೊಂಡರು.

೫ ತನ್ನ ತೋಟದಲ್ಲಿಯ ಕಾಯಿಪಲ್ಯಗಳನ್ನು ಬೆಳೆಸಿದ ಮಡಿಗಳಿಗೆ ಕೈಯಲ್ಲಿ ಸಲಿಕೆಯನ್ನು ತಕ್ಕೊಂಡು ನೀರು ಹಾಯಿಸುತ್ತಿದ್ದನು. ಅಥವಾ ನೀರು ಕಟ್ಟಿಕೊಳ್ಳುತ್ತಿದ್ದನು.

೬ ತಾವು ಇದುವರೆಗೆ ಮಾಡಿದ ಶ್ರಮದಿಂದ ಉಪಯೋಗ ಬೀಳಲಿಲ್ಲ ಇನ್ನು ನಾಲ್ಕು ಆಳು ನೀರು ಇದೆಯಲ್ಲ? ಏನು ಮಾಡಬೇಕೆಂಬ ಚಿಂತೆಯಿಂದ ಉಸಿರ್ಗರೆದು ಕುಳಿತರು.

# ೨೯. ಶಿರಸಂಗಿ ಲಿಂಗರಾಜರು

ಶಿರಸಂಗಿ ಎಂಬದೊಂದು ಕನ್ನಡ ನಾಡಿನಲ್ಲಿದ್ದ ಒಂದು ಸಂಸ್ಥಾನ. 'ಲಿಂಗರಾಜ' ಎಂಬವರು ಆ ಸಂಸ್ಥಾನದ ಕೊನೆಯ ಅಧಿಪತಿ. ಅವರಿಗೆ ಪುತ್ರ ಸಂತತಿಯಿರಲಿಲ್ಲ. ಆದಕ್ಕಾಗಿ ಅವರು ತಮ್ಮ ತರುವಾಯ ಸಂಸ್ಥಾನದ ಸಂಪತ್ತಿಯ ಉಪಭೋಗವನ್ನು ವ್ಯರ್ಥವಾಗಿ ಕಳೆಯದೆ ಅದು ತಮ್ಮ ಸಮಾಜದವರ ವಿದ್ಯೆಯ ಏಳ್ಗೆಗಾಗಿ ಉಪಯೋಗಿಸಲ್ಪಡಬೇಕೆಂಬ ವಿಶಾಲ ಭಾವನೆಯಿಂದ ಒಂದು ಮೃತ್ಯುಪತ್ರ ಬರೆದಿಟ್ಟು ವ್ಯವಸ್ಥೆ ಮಾಡಿದರು. ಇದರಿಂದ ಅವರ ಪರೋಪಕಾರ ಬುದ್ಧಿಯೂ ಪ್ರಕಟವಾಯಿತು. ಅವರು ಕೀರ್ತಿವಂತರೆಂದು ಅಜರಾಮರರಾಗಿ ಉಳಿದರು. ಅವರ ಮನೆತನದ ಇತಿಹಾಸವು ಈ ಪಾಠದಲ್ಲಿ ಸಂಕ್ಷೇಪವಾಗಿ ಬರೆಯಲ್ಪಟ್ಟಿದೆ.

## ಕಠಿಣ ಶಬ್ದಾರ್ಥಗಳ ಅರ್ಥ

ಕೀರ್ತಿ = ಯಶಸ್ಸು
ಮೇಧಾವಿಗಳು = ವಿಚಾರವಂತರು
ಶತಮಾನ = ನೂರುವರ್ಷಗಳ ದ್ದೊಂದು ಗುಂಪು (ಆೀತಿ)
ಮಿಗಿಲಾದವ = ಹೆಚ್ಚಿನವ
ಗೌರವ = ದೊಡ್ಡಿಸ್ತಿಕೆ
ವಿಸ್ತಾರ = ಹಬ್ಬುವಿಕೆ
ಮಟ್ಟಕ್ಕೆ = ಕೆಲವೊಂದು ಮರ್ಯಾದೆಗೆ
ಶೀಲಸಂಪನ್ನ = ಒಳ್ಳೆ ಗುಣದಿಂದ ಕೂಡಿದ
ವಿರತಿ = ವೈರಾಗ್ಯ
ಸಹಜ = ಸ್ವಾಭಾವಿಕ
ತಲಾಬ = ಕೆರೆ (ಸರೋವರ)
ಭವಾನಿ = ಪಾರ್ವತಿ
ಸಂಘ = ಕೂಟ
ಸಂತರ್ಪಣೆ = ನೀಡುವದು
ಪವಿತ್ರಸ್ಥಳ = ಶುದ್ಧವಾದ ಸ್ಥಾನ
ಮೃತ್ಯುಪತ್ರ = ಸಾಯುವಕಾಲಕ್ಕೆ ಬರೆದಿಡುವ ಲೇಖ
ಅಭಿವೃದ್ಧಿ = ಬೆಳವಣಿಗೆ
ಪ್ರೋತ್ಸಾಹನ = ಹುರುಪು
ದಿನಾಂಕ = ತಾರೀಕು
ದತ್ತಕಮಗ = ದಾನವಾಗಿ ಕೊಟ್ಟ ಕೊಂಡ ಮಗ

ಆಡಳಿತ = ಕಾರಭಾರ
ವ್ಯಾಜ್ಯ = ಜಗಳ
ವ್ಯವಹಾರ = ಬಳಕೆ
ಸಭಾಸದ = ಮೆಂಬರ
ಆರೈಕೆ = ಜೋಪಾನ
ದುರ್ದೈವ = ಕೆಟ್ಟ ನಸೀಬ
ಯಾತ್ರಿಕ = ತೀರ್ಥಯಾತ್ರೆ ಮಾಡುವವ
ಕಲಾವಿದರು = ಕೈಕೆಲಸಗಳಲ್ಲಿ ಬಲ್ಲಿದರು
ಖಂಡಿಸಿದರು = ತುಂಡುಮಾಡಿದರು
ವೃದ್ಧವಿವಾಹ = ವಯಸ್ಸು ಹೆಚ್ಚಾಗಿ ಲಗ್ನ ಮಾಡಿಕೊಳ್ಳುವದು
ದುಂದುಗಾರಿಕೆ = ಅಳತೆಮೀರಿ ಖರ್ಚು ಮಾಡುವದು
ತಡೆದರು = ನಿಲ್ಲಿಸಿದರು
ಜಾಗ್ರತಿ = ಚಲನವಲನ ಕ್ರಿಯೆ
ಅಧ್ಯಕ್ಷ = ಸಭಾಪತಿ
ಶಿವಾಧೀನರು = ಮೃತಪಟ್ಟವರು
ತ್ಯಾಗ = ಔದಾರ್ಯ
ಅಮರ = ಸಾವು ಇಲ್ಲದ್ದು

## ಅಭ್ಯಸನಗಳಿಗೆ ಉತ್ತರಗಳು

೧ ಲಿಂಗರಾಜರ ದತ್ತಕ ತಂದೆ 'ಜಾಯಪ್ಪ' ದೇಸಾಯಿಯವರು; ದತ್ತಕ ತಾಯಿ 'ಗಂಗಾಬಾಯಿ'ಯವರು.

೨ ವ್ಯವಹಾರಕ್ಕೆ ಸಾಕಷ್ಟು ಅಂದರೆ ಇಂಗ್ರೇಜಿ ಏಳನೆಯ ಇಯತ್ತೆಯ ವರೆಗೆ ಶಿಕ್ಷಣಪಡೆದರು.

೩ ಅವರ ಮಲತಾಯಿಯು ನ್ಯಾಯ ಹೂಡಿದ್ದರಿಂದ ಮನೆತನದಲ್ಲಿ ಹಲವು ತೊಡಕುಗಳುಂಟಾದುದರಿಂದ ಶಿಕ್ಷಣ ನಿಂತಿತು.

೪ ಅವರ ಮಲತಾಯಿಯು ಇವರ ದತ್ತಕವು ಸರಿಯಾದದ್ದಲ್ಲೆಂದು ವ್ಯಾಜ್ಯ ಹೂಡಿದ್ದು; ಇಬ್ಬರು ಹೆಂಡರೂ, ಹುಟ್ಟಿದ ಮಕ್ಕಳೂ ತೀರಿದ್ದು ಇವೆಲ್ಲವುಗಳ ಪರಿಣಾಮದಿಂದ ಅವರು ಕಷ್ಟವನ್ನು ಅನುಭವಿಸಬೇಕಾಯಿತು.

೫ ಅವರ ಮನಸ್ಸು ಪ್ರಾಪಂಚಿಕ ಸುಖವನ್ನು ಇಚ್ಛಿಸದಾಯಿತು. ಅಂದರೆ ಅದರಲ್ಲಿ ವೈರಾಗ್ಯ ವೃತ್ತಿಯುಂಟಾಯಿತು. ಪರೋಪಕಾರದಂಥ ಪುಣ್ಯಕರ್ಮವಿನ್ನೊಂದಿಲ್ಲ ಎಂಬ ದೃಢ ಭಾವನೆ ಅವರಲ್ಲಿ ಸ್ಥಿರವಾಯಿತು. ಹಾಗು ತನ್ನ ಸಮಾಜದ ಏಳ್ಗೆಯು ಹೆಚ್ಚಿನದು ಎಂಬದು ಇವೆಲ್ಲವು ಅವರ ಮನಸ್ಸಿನಮೇಲೆ ಹೆಚ್ಚಾಗಿ ಪರಿಣಾಮಗಳನ್ನುಂಟುಮಾಡಿದವು.

---

## ೩೦. ಭರತನು ರಾಮನ ಪಾದುಕೆಗಳನ್ನು ತಂದದ್ದು

### (ಕವಿತೆ)

ಶ್ರೀರಾಮಾಯಣದೊಳಗಿನ ಕಥೆಯ ಒಂದು ಪ್ರಸಂಗವಿದು. ಶ್ರೀರಾಮನು ತಂದೆಯ ವಚನ ಪಾಲಿಸುವದಕ್ಕಾಗಿ ತನಗೆ ದೊರೆತಿರುವ ರಾಜ್ಯಪಟ್ಟವನ್ನು ಕೂಡ ಗಣನೆಗೆ ತಾರದೆ ಹದಿನಾಲ್ಕು ವರುಷ ವನವಾಸ ಮಾಡಿದನು. ಅಯೋಧ್ಯೆಯಿಂದ ವನಕ್ಕೆ ಹೊರಡುವ ಕಾಲಕ್ಕೆ ಭರತನು ಅಂದರೆ ರಾಮನ ಮಲತಮ್ಮ ಕೈಕೆಯಾದೇವಿಯ ಹೊಟ್ಟೆಯಿಂದ ಜನಿಸಿದವನು ಊರಲ್ಲಿ ಇದ್ದಿರಲಿಲ್ಲ. ತನ್ನ ಸೋದರ ಮಾವನ ಊರಿಗೆ ಹೋಗಿದ್ದನು ಅವನು ತಿರುಗಿ ಬರುವದರಲ್ಲಿಯೇ ರಾಮನು ಸೀತಾ-ಲಕ್ಷ್ಮಣರೊಡನೆ ಹೊರಟು ಪಂಚವಟಿಗೆ ಹೋಗಿದ್ದನು. ಭರತನು ಬಂದನಂತರ ತನ್ನ ತಾಯಿಯಿಂದ ಕೂಡಿಕೊಂಡು ರಾಮನನ್ನು ಕಾಣುವದಕ್ಕಾಗಿ ಹೊರಟು

ಒಂದು ದಿನ ಮಾರ್ಗ ಕ್ರಮಿಸಿ ಮರುದಿನ ರಾಮನಿದ್ದಲ್ಲಿಗೆ ಬಂದನು. ರಾಮನಿಗೆ ತಿರುಗಿ ಅಯೋಧ್ಯೆಗೆ ಬಂದು ರಾಜ್ಯವಾಳಲು ಬಿನ್ನಯಿಸಿದನು. ರಾಮನು ಅದಕ್ಕೊಪ್ಪಲಿಲ್ಲ. 'ಕಡೆಗೆ ಭರತನು ನಿರುಪಾಯನಾಗಿ ರಾಮನ ಪಾದುಕೆಗಳನ್ನು ತಂದು ಅವನ ಹೆಸರಿನಿಂದ ರಾಜ್ಯಭಾರ ಸಾಗಿಸಿದನು. ಭರತನು ಶ್ರೀರಾಮನ ಪಾದುಕೆಗಳನ್ನು ತಂದ ಪ್ರಸಂಗವೇ ಈ ಕವಿತೆಯ ಪಾಠದಲ್ಲಿ ೫ ಪದ್ಯಗಳಿಂದ ಹೇಳಿದೆ.

ಈ ಕವಿತೆಗಳನ್ನು ಕನ್ನಡದಲ್ಲಿ ತೊರವೆ ಎಂಬ ಊರಿನ ನರಸಿಂಹನೆಂಬ ಕವಿಯು ರಚಿಸಿರುವನು. ಸಂಸ್ಕೃತದಲ್ಲಿ ವಾಲ್ಮೀಕಿ ಋಷಿಯು ಬರೆದ ರಾಮಾಯಣವನ್ನೆಲ್ಲ ಕನ್ನಡದಲ್ಲಿ ಕವಿತೆಯಿಂದ ಬರೆದಿರುವನು. ಈ ನರಸಿಂಹನಿಗೆ 'ಕುಮಾರ ವಾಲ್ಮೀಕಿ' ಎಂದೂ ಕರೆಯುವರು.

## ಕಠಿಣ ಶಬ್ದಾರ್ಥಗಳು

ದಳಭವನದಲಿ=ಎಲೆಯ ಮನೆಯಲ್ಲಿ
ಅವನಿ ಪತಿಗೆ = ಭೂಮಿಯ ಒಡೆಯನಿಗೆ, ಅರಸನಿಗೆ
ಅವಧರಿಸು = ಕೇಳು
ವಸುಧಾಯುವತಿ = ಭೂಮಿ ಎಂಬ ಸ್ತ್ರೀ
ಅಡಗಿದ ಬಳಿಕ = ಸತ್ತಮೇಲೆ
ಅವನಿಜಾತೆ = ಸೀತಾದೇವಿ
ಮಗೆಯುಮಾತು= ಮುಚ್ಚಿ ಆಡುವ ನುಡಿ
ಚಿತ್ತೈಸುವದು=ಲಕ್ಷ್ಯಕೊಡುವದು
ಕಂಬನಿ = ಕಣ್ಣೀರಿನ ಹನಿ
ಮನದನುತಾಪ=ಮನದ ಹಳಹಳಿ
ಶಿಖಿಯಲಿ = ಬೆಂಕಿಯಿಂದ
ಚಿತ್ತಶುದ್ಧಿ = ಸ್ವಚ್ಛ ಮನಸು
ಅಪಕೃತ = ನೀಚತರ ಕೆಲಸ
ಧರೆಯ = ಭೂಮಿಯನ್ನು

ರಾಘವೇಶ್ವರ = ರಾಮ
ಮೊರಲಾಪೆನೆ=ಮೊರಲುಸಮರ್ಥನೇ
ನಿಜ ಪಿತ = ತನ್ನ ತಂದೆ
ಉಮ್ಮಳಿಸದೆ = ಚಿಂತೆಮಾಡದೆ
ಹೆಮ್ಮೆಕಾರರು = ಅಭಿಮಾನಿಗಳು
ಭುವನ = ಜಗತ್ತು
ಕೃಪೆ = ದಯ
ಪದಕೆ = ಪಾದಗಳಿಗೆ
ಎರಗು = ಬಾಗು
ನೆಮ್ಮಿದವರು = ನಂಬಿದವರು
ಅಪ್ರಬುದ್ಧರು = ತಿಳಿಗೇಡಿಗಳು
ರಾಜೇಂದ್ರ = ಅರಸರಲ್ಲಿ ಹೆಚ್ಚಿನವ
ಪಾದುಕೆ = ಹಾವುಗೆ
ಮೇದಿನಿಯ = ಭೂಮಿಯನ್ನು
ನಿವೇದಿಸುವೆ = ಅರ್ಪಿಸುವೆ
ತನುವನು = ಶರೀರವನ್ನು
ಅನಲಂಗೆ = ಅಗ್ನಿಗೆ

## ಅಭ್ಯಸನೆಗಳಿಗೆ ಉತ್ತರ

೧ ನನ್ನ ತಂದೆ ತೀರಿದ ಬಳಿಕ ನೀನೆ ನನಗೆ ತಂದೆಯು; ಸೀತಾದೇವಿಯು ತಾಯಿಯು; ಅಂದಮೇಲೆ ನಾನು ನಿಮ್ಮ ಮಗನಾದಂತಾಯಿತು. ಆದ್ದರಿಂದ ತಂದೆಯ ತರುವಾಯ ನೀನು ಅರಸು

೨ 'ನೀನು ಬಂದು ರಾಜ್ಯವಾಳದೆ ಇದ್ದರೆ ನಿನ್ನ ತಮ್ಮಂದಿರಲ್ಲಿ ನಾನು ಒಬ್ಬನು ನಿನಗೆ ಇಲ್ಲ ಎಂದು ತಿಳಿ' ಎಂದು ಅವನು ಆಡಿದ ಮಾತಿನಿಂದ ಭರತನಲ್ಲಿ ಅಣ್ಣನ ಮೇಲಿನ ಪ್ರೇಮವು ಪ್ರಕಟವಾಗುತ್ತದೆ.

೩ ಮಗನೇ ನಾನು ಈ ಮೊದಲು ನಿನಗೆ ಮಾಡಿದ ದುಷ್ಕೃತ್ಯವನ್ನು ಮರೆತು ಇಂದು ಅಯೋಧ್ಯೆಗೆ ಬಂದು ರಾಜ್ಯವನ್ನು ಆಳು, ಎಂದು ಅಳುತ್ತ ಹಳಹಳಿಸುತ್ತ ಹೇಳಿದಳು.

೪ ಅರಸನಾದರೆ ತಂದೆಯ ಆಜ್ಞೆ-ವಚನಗಳನ್ನು ಮೀರಿದಂತೆ ಆಗುತ್ತದೆ. ಎಂಬ ವಿಚಾರದಿಂದ ರಾಮನು ಅರಸನಾಗಲು ಒಪ್ಪಲಿಲ್ಲ.

# ೩೧. ಸಿಂಹಗಡ

ಇಂದಿಗೆ ಮುನ್ನೂರು ವರುಷಗಳ ಹಿಂದಿನ ಸಂಗತಿಯಿದು. ಮಹಾರಾಷ್ಟ್ರದಲ್ಲಿ ಶಿವಾಜ ಮಹಾರಾಜನೆಂಬ ಬಲಿಷ್ಠ ಹಾಗು ಯುಕ್ತಿವಂತನಾದ ಅರಸನು ಹೊಸ ರಾಜ್ಯ ಕಟ್ಟಿ ಪ್ರಸಿದ್ಧನಾದನು. ಆತನಕಾಲಕ್ಕೆ ದಿಲ್ಲಿಯಲ್ಲಿ ಔರಂಗಜೇಬನೆಂಬ ಮೊಗಲ ವಂಶದ ಹೆಸರಾದ ಬಾದಶಹನು ಆಳುತ್ತಿದ್ದನು. ಶಿವಾಜಿಯನ್ನು ಆತನು ಮೊದಲಿನಿಂದಲೂ ದ್ವೇಷಿಸುತ್ತಿದ್ದನು. ಏನೊಂದು ಪರಿಯಿಂದ ಶಿವಾಜಿಯನ್ನು ಬಗ್ಗು ಬಡೆದು ದಕ್ಷಿಣ ಹಿಂದುಸ್ಥಾನದಲ್ಲಿಯೂ ತನ್ನ ಪ್ರಭುತ್ವವನ್ನು ಹರಡಬೇಕೆಂದು ಔರಂಗಜೇಬನ ಇಚ್ಛೆ. ಆದರೆ ಯುಕ್ತಿವಂತ ಶಿವಾಜಿಯ ಮುಂದೆ ಅವನ ಆಟ ಸಾಗಲಿಲ್ಲ. ಶಿವಾಜಿಯು ದುರ್ಗಗಳೂ ಸರದಾರರೂ ಇವುಗಳಿಂದ ಪರರಾಜರಿಗೆ ಅಜೇಯನಾಗಿದ್ದನು. ಶಿವಾಜಿಯ ಸರದಾರರಲ್ಲಿ ಒಬ್ಬನಾದ 'ತಾನಾಜಿ ಮಾಲುಸರೆ' ಎಂಬ ಶೂರನು ಶಿವಾಜಿಯ ಕೋಟೆಯಾದ 'ಕೊಂಡಾಣಾ' ಎಂಬುದನ್ನು ವಶಪಡಿಸಿಕೊಂಡು ವೈರಿಯಿಂದ ಹತನಾದನು. ಆದರಿಂದ ಶಿವಾಜಿಯು

ಆ ಕಿಲ್ಲೆಯು ಮೊದಲಿನ ಹೆಸರಾದ 'ಕೊಂಡಾಣಾ' ಎಂಬದನ್ನು ಬದಲು ಮಾಡಿ 'ಸಿಂಹಗಡ' ಎಂದು ಹೆಸರಿನಿಂದ ಕರೆದನು. ಈ ಮೇಲಿನ ಎಲ್ಲ ಸಂಗತಿಗಳು ಈ ಪಾಠದಲ್ಲಿ ಬರೆದಿವೆ.

## ಕಠಿಣ ಶಬ್ದಗಳ ಅರ್ಥಗಳು

ಟ್ಟ= ರಾಜ್ಯ ಸ್ಥಾಪಿಸು
ಗಟ್ಟಿಗರು= ಶೂರರು
ಪ್ರಭುತ್ವವನ್ನು= ಅಧಿಕಾರದ ಒಡೆತನವನ್ನು
ಕೊತ್ತಳಗಳು= ಬುರುಜುಗಳು
ಚತುರತನ= ಬುದ್ಧಿವಂತಿಕೆ
ದುರ್ಗಗಳು= ಕೋಟೆಗಳು
ಮನ್ನಣೆ= ಮಾನ್ಯ ಮರ್ಯಾದೆ
ಸುರಕ್ಷಿತವಾಗಿ= ಜೋಕೆಯಿಂದ
ಆಯುಕಟ್ಟಿನಸ್ಥಳ=ಮಹತ್ವದಸ್ಥಾನ
ಗಂಡಾಂತರ= ಸಂಕಟ
ಸಂಭ್ರಮ=ಉತ್ಸಾಹ
ಕಿವಿಗೊಡು=ಲಕ್ಷ್ಯಕೈತರು
ಭದ್ರವಾಗಿ=ಸ್ಥಿರವಾಗಿ
ಸಜ್ಜುಗೊಳಿಸಿ=ಸಿದ್ಧಪಡಿಸಿ
ಕೊಳ್ಳಿಇಡು=ಬೆಂಕೀಹಚ್ಚು
ಉಡುವು=ಅಡವಿಯಲ್ಲಿರುವ ಸರಟ ವರ್ಗದ ಒಂದು ಪ್ರಾಣಿ
ತುತ್ತತುದಿ=ತೀರ ಮೇಲೆ
ಗಾಢನಿದ್ದೆ=ಎಚ್ಚರವಿಲ್ಲದ ನಿದ್ದೆ
ರಭಸ=ಅರ್ಭಟ

## ಅಭ್ಯಸನಗಳಿಗೆ ಉತ್ತರಗಳು

೧ ಔರಂಗಜೇಬನು ತನ್ನ ಮಗನನ್ನು ಹಾಗು ಜಸವಂತಸಿಂಗನೆಂಬ ಒಬ್ಬ ತನ್ನ ಸರದಾರರನ್ನು ಸಸೈನ್ಯವಾಗಿ ಶಿವಾಜಿಯನ್ನು ಗೆಲ್ಲಲು ಕಳಿಸಿದ್ದನು.

೨ ಕೊಂಡಾಣಾ ಕಿಲ್ಲೆಯು ಔರಂಗಜೇಬನ ಕೈಕೆಳಗಿನವನಾದ ಉದಯಭಾನು ಎಂಬ ಸರದಾರನ ವಶದಲ್ಲಿತ್ತು.

೩ ಶಿವಾಜಿಯು ತನ್ನ ಶೂರ ಸರದಾರರಾದ ತಾನಾಜಿ ಹಾಗು ಸೂರ್ಯಾಜಿ ಎಂಬವರನ್ನು ಕೋಟೆ ಗೆಲಿಯಲು ಕಳಿಸಿದ್ದನು.

೪ ಕೊಂಡಾಣಾ ಕೋಟೆಯು ರಕ್ಷಣೆಗೆ ಮೊಗಲರ ಸೈನ್ಯವಿತ್ತು ಹಾಗು ಅದು ಸಹ್ಯಪರ್ವತದ ಒಂದು ಶಿಖರದ ಮೇಲೆ ಕಟ್ಟಿತ್ತು ಆ ಮೂಲಕ ತಾನಾಜಿಗೆ ಅದನ್ನು ಏರಿ ಹೋಗಿ ಸೇರಲು ಕಠಿಣವಾಗಿತ್ತು.

೫ ಉಡವೆಂಬ ಪ್ರಾಣಿಯ ನಡುವಿಗೆ ಹಗ್ಗವನ್ನು ಕಟ್ಟಿ ಅದನ್ನು ಕೋಟೆಯ ಗೋಡೆಗೆ ಹಚ್ಚಿದರು. ಉಡವು ಮೇಲೆ ಏರಹತ್ತಿತು ಅದಕ್ಕೆ ಕಟ್ಟಿದ ಹಗ್ಗದ ಸಹಾಯದಿಂದ ಮಹಾರಾಷ್ಟ್ರ ಸೈನಿಕರು ಮೇಲಕ್ಕೇರತೊಡಗಿದರು.

೬ ಉದಯಭಾನುವಿನಲ್ಲಿದ್ದ ಕಾವಲುಗಾರರಲ್ಲಿ ಜೀವಂತವಾಗಿ ಉಳಿದು ಓಡಿಹೋದ ಒಬ್ಬ ಕಾವಲುಗಾರನಿಂದ ಉದಯಭಾನುವಿಗೆ ಈ ಸುದ್ದಿ ತಿಳಿಯಿತು.

೭ ಸುದ್ದಿ ತಿಳಿದನಂತರ ಉದಯಭಾನುವು 'ಚಂದ್ರಾವಳಿ' ಎಂಬ ಮದ್ದಾನೆಯನ್ನು ಮರಾಠಾ ದಂಡಿನ ಮೇಲೆ ಹಾಯಿಸಿದನು.

೮ ತಾನಾಜಿಯು ಸತ್ತ ಸುದ್ದಿಯನ್ನು ತಿಳಿದು ಶಿವಾಜಿಯು 'ಕೋಟೆಯು ನಮ್ಮ ಕೈಸೇರಿತು ಆದರೆ ನಮ್ಮ ಸಿಂಹವು (ತಾನಾಜಿ) ಮಾತ್ರ ಹತವಾಯಿತು' ಎಂದು ನುಡಿದನು.

೯ ಶಿವಾಜಿಯು ನುಡಿದ ಈ ಮಾತುಗಳಿಂದಲೇ ಆ ಕೊಂಡಾಣಾ ಕಿಲ್ಲೆಗೆ 'ಸಿಂಹಗಡ' ಎಂಬ ಹೆಸರು ಪ್ರಾಪ್ತವಾಯಿತು. (ಗಡ=ಕಿಲ್ಲೆ)

೧೦ ಸಿಂಹಗಡ ವುುತ್ತಿಗೆ:—

ಸಹ್ಯಪರ್ವತದಲ್ಲಿ ಒಂದು ಶಿಖರದಲ್ಲಿ ಕೊಂಡಾಣಾ ಎಂಬ ಕೋಟೆ. ಅದನ್ನು ಛತ್ರಪತಿ ಶಿವಾಜಿಯು ಕಟ್ಟಿಸಿದನು. ಕೆಲಕಾಲದಮೇಲೆ ದಿಲ್ಲಿಯ ಬಾದಶಹ ಔರಂಗಜೇಬನು ಅದನ್ನು ಹಿಡಿದುಕೊಂಡು ತನ್ನ ಸೈನ್ಯವನ್ನು ಅಲ್ಲಿ ಇಟ್ಟು ರಕ್ಷಿಸುತ್ತಿದ್ದನು.

ಶಿವಾಜಿಯು ಔರಂಗಜೇಬನ ಸೆರೆಯಿಂದ ಪಾರಾಗಿ ಬಂದು ಔರಂಗಜೇಬನು ಹಿಡಿದುಕೊಂಡಿದ್ದ ಆ ಕೊಂಡಾಣಾ ಕೋಟೆಯನ್ನು ಹಿಂತಿರುಗಿ ವಶಪಡಿಸಿಕೊಳ್ಳಲು ತನ್ನ ಶೂರ ಸರದಾರರಾದ ತಾನಾಜಿ ಮಾಲಸುರೇ, ಸೂರ್ಯಾಜಿ ಎಂಬವರನ್ನು ಕಳಿಸಿದನು.

ಕೋಟೆಯು ಮೊಗಲರ ಭದ್ರ ಕಾವಲಿನಲ್ಲಿದ್ದುದಲ್ಲದೆ ಎತ್ತರ ಶಿಖರದಲ್ಲಿದ್ದುದರಿಂದ ಏರಿ ಹೋಗಲು ಮರಾಠರಿಗೆ ಕಠಿಣವೆನಿಸಿತು. ವಿಚಾರ ಹೊಳೆಯದಂತಾಯಿತು ಕೊನೆಗೆ ಈ ಘೋರ ಪ್ರಸಂಗದಲ್ಲಿ ಶಿವಾಜಿಯ ಸರದಾರರಲ್ಲಿಯ ಒಬ್ಬನ ವಿಚಾರದಿಂದ ಅಡವಿಯಲ್ಲಿ ಸಿಕ್ಕ 'ಘೋರಪಡ' ಅಂದರೆ ಉಡ ಎಂಬ ಪ್ರಾಣಿಯ ನಡುವಿಗೆ ಹಗ್ಗ ಕಟ್ಟಿ ಕೋಟೆಯ ಗೋಡೆಗೆ

ಅದನ್ನು ಹೆಚ್ಚಿದರು. ಆ ಉಡವು ಸರಸರನೆ ಕೋಟೆಯ ತುದಿಯವರೆಗೆ ಏರಿತು. ಬಳಿಕ ಮರಾಠಾ ಸೈನಿಕರು ಉಡದ ಟೊಂಕದ ಹಗ್ಗದ ಸಹಾಯದಿಂದ ಕೋಟೆಯ ಮೇಲೇರಿ ಹೋಗಿ ಅಲ್ಲಿಯ ಮೊಗಲ ಸೈನಿಕರನ್ನೂ ಕಾವಲುಗಾರರನ್ನೂ ಹಣಿದು ಕೋಟೆಯನ್ನು ವಶಪಡಿಸಿಕೊಂಡರು. ಆದರೆ ಕಾವಲುಗಾರರಲ್ಲಿ ಜೀವಂತವಾಗಿ ಉಳಿದ ಕಾವಲುಗಾರನೊಬ್ಬನು ಕೋಟೆಯ ಅಧಿಕಾರಿ 'ಉದಯಭಾನು'ವಿಗೆ ಈ ವರ್ತಮಾನ ತಿಳಿಸಿದನು. ರೊಚ್ಚಿಗೆದ್ದ ಉದಯಭಾನುವು ಮದ್ದಾನೆಯೊಂದನ್ನು ಮರಾಠಾ ಸೈನ್ಯದಲ್ಲಿ ಬಿಟ್ಟನು. ಆ ಮದ್ದಾನೆಯಿಂದ ತಾನಾಜಿಯು ಕೊಲ್ಲಲ್ಪಟ್ಟನು ಬಳಿಕ ಸೂರ್ಯಾಜಿಯು ಉದಯಭಾನುವನ್ನು ವಧೆಮಾಡಿದನು.

ಶಿವಾಜಿ ಮಹಾರಾಜನು ಕಿಲ್ಲೆಯು ವಶವಾದುದನ್ನೂ ತಾನಾಜಿಯು ಮೃತಪಟ್ಟುದನ್ನೂ ಕೇಳಿ ಹಳಹಳಿಸಿದನಲ್ಲದೆ 'ಕೋಟೆ ಸಿಕ್ಕಿತು ಸಿಂಹವು ಸತ್ತಿತು' ಎಂಬ ಉದ್ಗಾರ ತೆಗೆದನು ಈ ಉದ್ಗಾರ ವಾಕ್ಯದಿಂದಲೇ ಆ ಕೋಟೆಗೆ 'ಸಿಂಹಗಡ' ಎಂಬ ಹೊಸ ಹೆಸರುಂಟಾಯಿತು.

ಉಡದ ಟೊಂಕಕ್ಕೆ ಹಗ್ಗ ಕಟ್ಟಿ ಕೋಟೆಯ ಗೋಡೆಗೆ ಅಂಟಿಸಿ ಮೇಲೆ ಏರಿ ಹೋಗುವ ಯುಕ್ತಿಯನ್ನು ಕಂಡುಹಿಡಿದವನ ಮನೆತನಕ್ಕೆ 'ಘೋರಪಡೆ' ಎಂಬ ಅಡ್ಡ ಹೆಸರು ಪ್ರಾಪ್ತವಾಯಿತು. ಈ ಹೆಸರಿನ ಮನೆತನದ ಮರಾಠರು ನಮ್ಮ ನಾಡಿನಲ್ಲಿರುವರು. ಇದರಿಂದ ಅಂದರೆ ಉಡದ ಯುಕ್ತಿಯಿಂದ 'ಬುದ್ಧಿವಂತನೇ ಬಲವಂತನು' ಎಂಬ ಮಾತೊಂದು ವ್ಯಕ್ತವಾಗುವದು.

---

# ೩೨. ಕಾಗದದ ಆತ್ಮಕಥೆ

## ಪಾಠದ ಸಾರಾಂಶ

ಈ ಪಾಠದಲ್ಲಿ ಕಾಗದವು ಸಿದ್ಧವಾಗುವ ಬಗೆಯನ್ನು ಕಾಗದವೆಂಬ ವ್ಯಕ್ತಿಯೇ ಮಾತಾಡಿ ಹೇಳುವಂತೆ ಬರೆದಿದೆ. ಅದು ಹೇಳಿದ ಮಾತುಗಳೆಂದರೆ:—ಮೊದಲಿನ ಕಾಲದಲ್ಲಿ ಕಾಗದಗಳ ಬಳಿಕೆಯಿದ್ದಿಲ್ಲ, ಜನರು ತಾಡವೆಂಬ ಗಿಡಗಳ ಎಲೆಗಳನ್ನು ತಕ್ಕೊಂಡು ಅವುಗಳ ಮೇಲೆ ಮೊಳೆಯಿಂದ ಇಲ್ಲವೆ ದಟ್ಟವಾದ ಕಪ್ಪು ಮಸಿಯಿಂದ ಬರೆಯುತ್ತಿದ್ದರು. ಬರಬರುತ್ತ

ನಮ್ಮ ದೇಶದ ಪೂರ್ವನಿಟ್ಟಿನಲ್ಲಿದ್ದ ಚೀನ ಎಂಬ ದೇಶದಲ್ಲಿ ಕಾಗದ ಮಾಡುವ ಯುಕ್ತಿ ಹೊರಟಿತು. ಅದೇ ಎಲ್ಲ ಕಡೆಗೆ ಪ್ರಸಾರವಾಗಿ ಕಾಗದವನ್ನು ಸಿದ್ಧಪಡಿಸುವರು. ಮೊದಲು ಕಾಗದ ಮಾಡಲು ಯಂತ್ರಗಳಿದ್ದಿಲ್ಲ. ಈಗ ಯಂತ್ರಗಳಿಂದ ಕಾಗದ ಮಾಡುವರು. ಬಿದಿರು, ಕಬ್ಬಿನ ಸಿಪ್ಪೆ ಮೊದಲಾದ ನಿರುಪಯೋಗಿ ಪದಾರ್ಥಗಳಿಂದ ಕಾಗದ ಮಾಡುವರು. ರಾಸಾಯನಿಕ ಪದಾರ್ಥಗಳೊಡನೆ ಆ ಕಬ್ಬಿನ ಸಿಪ್ಪೆ ಮೊದಲಾದವನ್ನು ಕೂಡಿಸಿ ಯಂತ್ರ ಸಹಾಯದಿಂದ ನೀರಿನ ಪೀಪೆಗಳಲ್ಲಿ ಹಾಕಿ ಕಾಸುವರು. ಬಳಿಕ ಅದನ್ನು ಹರಿಯಲ್ಲಿ ಬಿಟ್ಟು ಸೋಸುವರು. ತಕ್ಕಷ್ಟು ಗಟ್ಟಿಯಾದ ಬಳಿಕ ರೋಲುಗಳ ನಡುವೆ ಹಾಕಿ ಹಾಳೆ ಮಾಡುವರು. ಈ ಹಾಳೆಗಳೇ ಕಾಗದಗಳು. ಈ ಕಾಗದವು ಬರೆಹಕ್ಕಾಗಿ ಬಹಳ ಉಪಯೋಗವಾಗುವದು.

## ಕಠಿಣ ಶಬ್ದಾರ್ಥಗಳು

ಆತ್ಮಕಥೆ = ತನ್ನ ಸ್ಥಿತಿಯನ್ನು ಹೇಳುವದು
ಆಲೋಚಿಸು = ವಿಚಾರಮಾಡು
ಕನಸು = ನಿದ್ದೆಯಲ್ಲಿ ಕಾಣುವ ನೋಟ, ಅಜ್ಞಾನ, ದಡ್ಡತನ
ಓಲೆ = ಪಾನು
ಪ್ರಾಚೀನವಸ್ತು = ಮೊದಲಿನ ಕಾಲದ ಪದಾರ್ಥ
ಸಂಗ್ರಹ = ಕೂಡುಹಾಕುವಿಕೆ
ರೂಪ = ಆಕಾರ
ಜನ್ಮತಾಳು = ಹುಟ್ಟುವದು
ಅಂದ = ಸೊಗಸು
ಕಲೆ = ಜಾಣತನ
ಮರದಗೊಜ್ಜು । ಕಟ್ಟಿಗೆ ಮುದ್ದೆ
ಮಿಶ್ರಣ = ಬೆರಿಕೆ
ಗಲ್ಲಿಸು = ಅಗಳಾಡಿಸು
ಜರಡಿ = ಸೋಸುವ ಸಾಧನ
ಹಿಚುಕು = ಹತ್ತೊತ್ತು
ಶುಭ್ರವರ್ಣ = ಬಿಳೀ ಬಣ್ಣ
ಸಹಿಸಿ = ತಾಳಿಕೊಂಡು
ಮುದ್ರೆ = ಅಚ್ಚುಹಾಕುವದು
ನಿವೇದಿಸು = ಕೊಡುವದು, ಹೇಳುವದು
ನಿತ್ಯಕರ್ಮ = ದಿನದಕೆಲಸ

## ಅಭ್ಯಸನೆಗಳ ಉತ್ತರ

೧ ಆತ್ಮಕಥೆಯೆಂದರೆ ತನ್ನ ಜನ್ಮಾಂತ್ಯದವರಗೆ ನಡೆದ ಸಂಗತಿಗಳನ್ನು ಇನ್ನೊಬ್ಬರಿಗೆ ಹೇಳುವದು. ಇಲ್ಲವೆ ಬರೆದು ಇಡುವದು.

೨ ಮೊದಲಿನ ಕಾಲದ ಜನರು ತಾಡವೆಂಬ ಎಲೆಗಳ ಮೇಲೆ ಬರೆಯುತ್ತಿದ್ದರು.

೩ ಕಾಗದದ ಶೋಧವು ಮೊದಲು ಚೀನಾ ಎಂಬ ದೇಶದಲ್ಲಿ ಆಯಿತು.

೪ ಕಾಗದವನ್ನು ಕಬ್ಬಿನಸಿಪ್ಪೆ, ಬಿದಿರು ಮುಂತಾದ ನಿರುಪಯೋಗಿ ಪದಾರ್ಥಗಳಿಂದ ಮಾಡುವರು.

೫ ಕಾಗದವು ತಯಾರಾಗುವ ಕ್ರಮವನ್ನು ಪಾಠದ ಸಾರಾಂಶದಲ್ಲಿ ನೋಡು.

೬ ಫ್ರೆಂಚಕಾಗದ, ಫುಲಸ್ಕೇಪ ಕಾಗದ, ತೆಳುವಾದ ನುಣುಪಾದ ಬಣ್ಣಾದ, ಎಣ್ಣೆಯಂತೆ ತೋರುವ ಕಾಗದಗಳು, ರಟ್ಟುಗಳು.

೭ ಕಾಗದವು ಮುಖ್ಯವಾಗಿ ಯಾವದೊಂದು ಸಂಗತಿಯನ್ನು ಅದರ ಮೇಲೆ ಬರೆಯಲು, ಚಿತ್ರ-ನಕಾಶಗಳನ್ನು ರೇಖಿಸಲು ಉಪಯೋಗವಾಗುತ್ತದೆ. ಹೂವಿನ ಗಿಡಗಳನ್ನು ಕಟ್ಟುವರು. ಸಾಮಾನುಗಳನ್ನು ಹಾಕುವ ಪುಡಿಕೆಗಳಿಗಾಗಿ ಬಳಸುವರು. ಇದಲ್ಲದೆ ಕಾಗದದಿಂದ ಆಕಾಶಬುಟ್ಟಿ, ಪುಸ್ತಕ, ಕಾರ್ಡು, ಪಾಕೀಟುಗಳನ್ನು ಮಾಡುವರು. ಇತ್ಯಾದಿ ಹಲವು ರೀತಿಯಿಂದ ಕಾಗದದ ಉಪಯೋಗವಾಗುವದು.

---

## ೩೩. ವಾಲ್ಮೀಕಿ

### ಪಾಠದ ಸಾರಾಂಶ

ನಮ್ಮ ದೇಶದಲ್ಲಿ ಎಲ್ಲರಲ್ಲಿ ಹೇಳಲ್ಪಡುವ ರಾಮನ ಕಥೆಯನ್ನು 'ರಾಮಾಯಣ' ಎಂಬ ಗ್ರಂಥದಲ್ಲಿ ಓದಬಹುದು. ಈ ಗ್ರಂಥವನ್ನು ಬರೆದವನೆಂದರೆ 'ವಾಲ್ಮೀಕಿ' ಎಂಬಾತನು. ಆವನು ಮೊದಲು ಬೇಡನು. ಹಾದಿಕಾರರನ್ನು ಸುಲಿದು ಹೊಟ್ಟೆಹೊರಕೊಳ್ಳುತ್ತಿದ್ದನು. ಒಂದು ಸಾರೆ ಕೆಲವು ಋಷಿಗಳು ಆವನ ಮಾರ್ಗದಲ್ಲಿ ಬರಲು ಬೇಡನು ಆವರನ್ನು ಸುಲಿಯಲು ಸಿದ್ಧನಾದನು. ಆಗ ಋಷಿಗಳು ಆವನಿಗೆ ಪಾಪ-ಪುಣ್ಯಗಳ ಕಲ್ಪನೆ ಮಾಡಿಕೊಡಲು ತಾನು ಮಾಡುವ ಕೆಲಸವು ಅಂದರೆ ಹಾದೀ ಬಡೆಯುವದು ಪಾಪವೆಂದು ತಿಳಿದ. ಅಂದೇ ಆವನಿಗೆ ಉಪರತಿಯಾಗಿ ಋಷಿಗಳಿಂದ 'ರಾಮ' ಮಂತ್ರೋಪದೇಶ ಹೊಂದಿದ. ಆ ರಾಮ ಮಂತ್ರವನ್ನು ಎಷ್ಟೋವರ್ಷ

ಏಕಚಿತ್ತದಿಂದ ಧ್ಯಾನಮಾಡಲು ಅವನ ಮೈಮೇಲೆ ಹುತ್ತುಗಳು ಬೆಳೆದವು. ಈ ಮೂಲಕವಾಗಿ ಅವನಿಗೆ ಋಷಿಯೆಂದು ಕರೆಯಹತ್ತಿದರು. ಅವನ ಮೈಮೇಲೆ ಹುತ್ತು (ವಲ್ಮೀಕ) ಬೆಳೆದದ್ದರಿಂದ ಅವನಿಗೆ 'ವಾಲ್ಮೀಕ' ಋಷಿ ಎಂಬ ಹೆಸರು ಪ್ರಾಪ್ತವಾಯಿತು. ಇವನಿಗೆ ಬ್ರಹ್ಮನ ಸಾಕ್ಷಾತ್ಕಾರವಾಗಿ 'ರಾಮಾಯಣ' ಮಹಾಕಾವ್ಯ ಬರೆದನು. ಅದರಿಂದಲೇ ಇವನಿಗೆ ಆದಿಕವಿ ಎಂದು ಎಲ್ಲರೂ ನುಡಿಯಹತ್ತಿದರು.

## ಕಠಿಣ ಶಬ್ದಾರ್ಥ ಪರಿಚಯ

ಕಾವ್ಯ = ಕವಿತೆಗಳುಳ್ಳದ್ದು;
ಇತಿಹಾಸ = ಕಾಲಕ್ರಮದಿಂದ ನಡೆದು ಬಂದ ಸಂಗತಿ ಬರೆದದ್ದು
ಪುರಾಣ = ದೇವತೆಗಳ ಹಾಗು ದೇವಾಂಶವುಳ್ಳವರ ಸಂಗತಿ ಬರೆದ ಗ್ರಂಥ
ಘೋರಾರಣ್ಯ = ಭಯಂಕರವಾದ ದಟ್ಟಡವಿ
ಹೊಂಚಿಕೊಂಡು = ಜಪ್ಪಿಸಿಕೊಂಡು
ಜೋಗಿಗಳು = ಯೋಗಾಭ್ಯಾಸ ಮಾಡಿದವರು (ಋಷಿಗಳು)
ಬಚ್ಚಿಟ್ಟು = ಮುಚ್ಚಿ ಇಟ್ಟು
ಮಹಿಮೆ = ಪ್ರಭಾವ
ಸಂಭಾವಿತ = ಒಳ್ಳೆ ಮನುಷ್ಯ
ಸುಜ್ಞಾನಿ = ತಿಳುವಳಿಕೆಯುಳ್ಳವ
ಶಾಂತ ತೇಜಸ್ಸು = ಸಮಾಧಾನ ಯುಕ್ತ ಮುಖ ಮುದ್ರೆ
ದೋಚಿಕೊಂಡು = ಅಪಹರಿಸಿ ಕೊಂಡು
ಕೈಕಾಲೇ ಹೋದವು = ಅಂಜಿದನು (ಎಂಬರ್ಥ)
ಜಪ = ಇಷ್ಟದೇವನ ನಾಮಸ್ಮರಣೆ
ಆಶೀರ್ವಾದ = ಹರಕೆ
ಖಂಡಿತ = ನಿಶ್ಚಯ
ಅಕಲ್ಯಾಣ = ಕೆಡಕು
ಆದಿಕವಿ = ಕವಿಗಳಲ್ಲಿ ಮೊದಲನೆಯವ

## ಅಭ್ಯಸನೆಗಳಿಗೆ ಉತ್ತರಗಳು

೧ ಬ್ರಹ್ಮನ ಆಶೀರ್ವಾದದಿಂದ ರಾಮಾಯಣವನ್ನು ಕಾವ್ಯರೂಪದಿಂದ ಮೊದಲು ಇವನು ಬರೆದುದರಿಂದ 'ಆದಿಕವಿ' ಎಂಬ ಹೆಸರು ವಾಲ್ಮೀಕಿಗೆ ಬಂದಿಂತು.

೨ ವಾಲ್ಮೀಕಿಯು ಮೊದಲು ಹಾದಿಬಡೆಯುವ ನೀಚ ಕೆಲಸ ಮಾಡುತ್ತಿದ್ದನು.

೩ ಅಲ್ಲಿಗೆ ಋಷಿಗಳ ಗುಂಪೊಂದು ಬಂದಿತು.

೪ ಪರೋಪಕಾರವೇ ಪುಣ್ಯ, ಪರಪೀಡೆಯೇ ಪಾಪ ಎಂದು ಹೇಳಿದರು.

೫ ಪುಣ್ಯ ಕರ್ಮಗಳಿಗಷ್ಟೇ ನಾವು ಪಾಲುಗಾರರು ಆದರೆ ಪಾಪಕ್ಕೆ ಪಾಲುಗಾರರಲ್ಲ ಎಂದು ಹೇಳಿದರು. ಹಾಗು ನಿನ್ನ ಹೆಂಡಿರು ಮಕ್ಕಳು "ನಿನ್ನ ಪುಣ್ಯ ಕರ್ಮಫಲವನ್ನಷ್ಟೆ ಸ್ವೀಕರಿಸುವರು. ಪಾಪದ ಫಲವನ್ನು ಮಾತ್ರ ತಕೊಳ್ಳುವದಿಲ್ಲ" ಎಂದು ಹೇಳಿದರು.

೬ ಹೆಂಡಿರು ಮಕ್ಕಳು ಪಾಪಕ್ಕೆ ನಾವು ಪಾಲಗಾರರಲ್ಲ ಎಂದು ಹೇಳಿದ್ದರಿಂದ ಬೇಡನಿಗೆ ತನ್ನ ಉದ್ಯೋಗದಲ್ಲಿ ತಿರಸ್ಕಾರ ಹುಟ್ಟಿತು, ಅಲ್ಲದೆ ಪ್ರಪಂಚದಲ್ಲಿ ಉಪರತಿಯುಂಟಾಯಿತು.

೭ ಆ ಬೇಡನ ಮೈಮೇಲೆ ಹುತ್ತು (ವಲ್ಮೀಕ), ಬೆಳೆದದ್ದರಿಂದ ವಾಲ್ಮೀಕಿ ಎಂಬ ಹೆಸರು ಆವನಿಗೆ ಪ್ರಾಪ್ತವಾಯಿತು.

೮ ಅಯೋಧ್ಯೆಯ ಅಧಿಪತಿ ಶ್ರೀರಾಮನ ಚರಿತ್ರರೂಪವಾದ 'ರಾಮಾಯಣ' ಎಂಬ ಮಹಾಕಾವ್ಯ ಬರೆದನು.

೯ ಸಾಕ್ಷಾತ್ ಬ್ರಹ್ಮನು ವಾಲ್ಮೀಕಿಗೆ ರಾಮಾಯಣ ರಚಿಸಲು ಹೇಳಿದನು.

---

# ೩೪. ರವೀಂದ್ರನಾಥ ಠಾಕೂರ

## ಪಾಠದ ಸಾರಾಂಶ

ಈ ಪಾಠದಲ್ಲಿ ನಮ್ಮ ದೇಶದ ಬಂಗಾಲ ಪ್ರಾಂತದಲ್ಲಿ ಜನಿಸಿ ತನ್ನ ಸಾಹಿತ್ಯಸಾಕ್ಷಾತ್ಕಾರದಿಂದ ವಿಶ್ವಕವಿಯೆಂದು ಹೆಸರು ಪಡೆದ ರವೀಂದ್ರರ ಚರಿತ್ರೆಯನ್ನು ಹೇಳಿದೆ.

ರವೀಂದ್ರರ ತಂದೆ ದೇವೇಂದ್ರನಾಥರೆಂಬವರು. ಮನೆತನದಿಂದ ಸುಖ ಸಮೃದ್ಧಿ ಭೋಗವುಳ್ಳವರು. ಸಣ್ಣವರಿರುವಾಗಲೇ ರವೀಂದ್ರರ ತಾಯಿಯು ಗತಿಸಿದ್ದರಿಂದ ತಂದೆ ದೇವೇಂದ್ರನಾಥ ರವೀಂದ್ರರ ಸಂರಕ್ಷಣೆಮಾಡಿದರು. ಶಾಲೆಯ ಅಭಿರುಚಿ ಕಡಿಮೆ, ಸದಾ ಸೃಷ್ಟಿಯ ಸೊಬಗನ್ನು ಸವಿಯುವ ಆಶೆ ಅವರದು. ಹೆಚ್ಚಿನ ಶಿಕ್ಷಣಕ್ಕಾಗಿ ಇಂಗ್ಲಂಡಿಗೆ ಹೋಗಿದ್ದರು. ಇವರದು

ಸಾಹಿತ್ಯದ ಕಡೆಗೆ ವಿಶಾಲದೃಷ್ಟಿಯಿತ್ತು. ಇಂಗ್ಲಿಷ ಸಾಹಿತ್ಯದ ಕಡೆಗೂ ಇವರ ಆಸ್ಥೆ ಹೆಚ್ಚಿತು. ಹಲವು ಕಾವ್ಯ-ನಾಟಕಗಳನ್ನು ಬರೆದರು. ಗಾಯನ ಚಿತ್ರ ಕಲೆಗಳಲ್ಲಿ ಇವರಿಗೆ ಅತಿಯಾದ ಅಭಿರುಚಿ; ಇವರು ಗೀತಾಂಜಲಿ ಎಂಬ ಕಾವ್ಯ ವನ್ನು ಬರೆದರು. ಅದು ಜಗತ್ತಿನ ಹಲವು ಭಾಷೆಗಳಲ್ಲಿ ಪರಿವರ್ತಿಸಲ್ಪಟ್ಟಿದೆ. ಈ ಕಾವ್ಯ ಬರೆದುದರಿಂದಲೇ ಇವರಿಗೆ ಬಹುದೊಡ್ಡ ಮಾನವಾದ 'ನೊಬೆಲ್ ಪ್ರಾಯಿಝು' ಎಂಬುದು ದೊರೆಯಿತು. ಇದರಿಂದಲೇ ಜಗತ್ತಿನಲ್ಲೆಲ್ಲ ಇವರ ಬೆಳಕು ಬಿದ್ದಿತು. ಇವರು ತಮ್ಮದೇ ಆದ ಶಾಂತಿನಿಕೇತನ ಎಂಬ ಆಶ್ರಮ ಸ್ಥಾಪಿಸಿ ಅಲ್ಲಿ ಬಾಲ-ಬಾಲಕಿಯರಿಗೆ ಶಿಕ್ಷಣ ಕೊಡುತ್ತಿದ್ದರು. ಯೋಗ್ಯತೆ ಯುಳ್ಳ ಶಿಕ್ಷಕರನ್ನು ಅಲ್ಲಿ ಇಟ್ಟು ಅವರಿಂದಲೂ ಶಿಕ್ಷಣ ಕೊಡಿಸುತ್ತಿದ್ದರು. ಇವರ ಧರ್ಮಪತ್ನಿಯು ಸಾದಾ ಹಾಗು ಸಭ್ಯ ಆಚರಣೆಯುಳ್ಳವರಾಗಿದ್ದರು. ರವೀಂದ್ರರು ಬರೆದ ಗ್ರಂಥಗಳೂ, ಸ್ಥಾಪಿಸಿದ ಸಂಸ್ಥೆಗಳೂ, ಅತಿಶಯವಾಗಿ ಮಾನ್ಯತೆ ಪಡೆದಿವೆ.

ಈ ವಿಶ್ವಕವಿಯು ಜಗತ್ತಿಗೆ ಕೀರ್ತಿವಂತನಾಗಿ ಮೊನ್ನೆ ಮೊನ್ನೆ ಅಂದರೆ ೧೯೩೧ರಲ್ಲಿ ತೀರಿದನು.

## ಕಠಿಣ ಶಬ್ದಗಳ ಪರಿಚಯ

ಭಾರತ = ಹಿಂದುಸ್ತಾನ
ಸದಾಚಾರ = ಒಳ್ಳೆ ನಡೆವಳಿ
ಕುಂಟನೆವ = ಸುಳ್ಳುಕಾರಣ
ಸೃಷ್ಟಿ ಸೌಂದರ್ಯ = ಸೃಷ್ಟಿಯ ಸೊಬಗು
ಮನೋವೃತ್ತಿ = ಮನಸಿನಸ್ಥಿತಿ
ವಂಗೀಯ=ಬಂಗಾಲಕ್ಕೆ ಸಂಬಂಧಿಸಿದ
ಕವೀಂದ್ರ = ಕವಿಗಳಲ್ಲಿ ಶ್ರೇಷ್ಠ
ಪ್ರಾವೀಣ್ಯ = ನೈಪುಣ್ಯ
ಪಾಶ್ಚಿಮಾತ್ಯರು = ಪಶ್ಚಿಮನಿಟ್ಟಿನ ದೇಶದವರು (ಯುರೋಪಿಯನ್ನರು)
ತಜ್ಞ = ಬಲ್ಲವ, ನುರಿತ
ಕೌಟುಂಬಿಕ = ಕುಟುಂಬಕ್ಕೆ ಸಂಬಂಧಿಸಿದ
ವಿಶ್ವ = ಜಗತ್ತು
ಆದರ್ಶಪ್ರಾಯ = ಮಾದರಿ ತೆಗೆದು ಕೊಳ್ಳುವಂಥ
ಮಹಾವ್ಯಕ್ತಿ = ದೊಡ್ಡವ

## ಅಭ್ಯಸನಗಳಿಗೆ ಉತ್ತರಗಳು

೧ ದೇವೇಂದ್ರನಾಥರಲ್ಲಿ ಒಳ್ಳೆ ನಡೆವಳಿಯೂ ದೇವಭಕ್ತಿಯೂ ಇದ್ದುದರಿಂದ ಅವರನ್ನು ಮಹರ್ಷಿ (ದೊಡ್ಡ ಋಷಿ) ಎಂದು ಕರೆಯುತ್ತಿದ್ದರು.

೨ ಶಾಲೆ ಕಲಿಯುವದು ಬೇಡಾಯಿತು, ಗುರುಗಳ ಬಳಿಯಲ್ಲಿರುವದು ಬೇಡಾಯಿತು. ಸ್ವಾತಂತ್ರ್ಯವನ್ನು ಮನಸು ಬಯಸುತ್ತಿತ್ತು.

೩ ರವೀಂದ್ರರು ಹಿಮಾಲಯಕ್ಕೆ ಹೋಗಿ ಅಲ್ಲಿಯ ಸೃಷ್ಟಿಯ ಸೌಂದರ್ಯ ಕಂಡು ಹಾಡುವರು; ಕವಿತೆ ಕಟ್ಟುವರು. ಇದರಿಂದ ಅವರು ಕವೀಂದ್ರರಾಗುವರೆಂದು ಜನ ನಂಬಿತು. ಅವರ ಗೀತಾಂಜಲಿಯೂ ಕಾವ್ಯ ಮಯವೇ.

೪ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಇಂಗ್ಲಂಡಿಗೆ ಹೋಗಿದ್ದರು. ಅಲ್ಲಿ ಆಂಗ್ಲ ಸಾಹಿತ್ಯದ ವಿಷಯದ ಕಡೆಗೆ ಹೆಚ್ಚು ಗಮನವಿತ್ತರು.

೫ ರವೀಂದ್ರರು 'ಗೀತಾಂಜಲಿ' ಎಂಬ ಕಾವ್ಯ ಬರೆದರು.

೬ ರವೀಂದ್ರರ ಮಾತೃ ಭಾಷೆ ಬಂಗಾಲಿ. ಇದರ ಹೊರತು ಸಂಸ್ಕೃತ, ಇಂಗ್ಲಿಷ ಭಾಷೆಗಳ ಅಭ್ಯಾಸವನ್ನೂ ಮಾಡಿದ್ದರು.

೭ ಬಾಲ-ಬಾಲಕಿಯರಿಗೆ ತಕ್ಕುದಾದ ಶಿಕ್ಷಣ ದೊರೆಯಬೇಕೆಂಬುದೇ ಅವರ ಇಚ್ಛೆಯಾಗಿತ್ತು.

೮ ರವೀಂದ್ರರು ಸ್ಥಾಪಿಸಿದ ಆಶ್ರಮವೇ 'ಶಾಂತಿನಿಕೇತನವು' ಇದರಿಂದ ೭ನೇ ಪ್ರಶ್ನೆಯ ಉದ್ದೇಶ ಸಾಧಿಸಿದರು.

೯ ರವೀಂದ್ರರ ವಿಶ್ವಭಾರತೀಯ ವಿದ್ಯಾರ್ಥಿಗಳು ಸಾದಾಜೀವಿಗಳು, ಸರಳ ಸ್ವಭಾವವುಳ್ಳವರು, ದೇಶ ಪ್ರೇಮಿಗಳು, ಸ್ವಾವಲಂಬಿಗಳು, ಯೋಗ್ಯ ಹಾಗು ಶ್ರೇಷ್ಠ ವಿಚಾರಿಗಳು ಆಗಿ ಒಳ್ಳೆಯ ಗುಣಗಳು ಅವರಲ್ಲಿ ಮೂರ್ತವಾಗಿರುತ್ತಿದ್ದವು.

೧೦ ರವೀಂದ್ರರ ಆದರ್ಶ ತತ್ವಗಳು ವಿಶ್ವಬಂಧುತ್ವ, ಮಾದರಿಯ ಮನೆ, ಮಾದರಿಯ ಶಾಲೆ, ಮಾದರಿಯ ದೇಶ ಇವೇ.

೧೧ ಜಗತ್ತಿಗೆ ಪ್ರತಿಭಾವಂತರ ಆವಶ್ಯಕತೆಯಿದೆ.

ವಿಶ್ವಾಮಿತ್ರನು ಕ್ಷತ್ರಿಯನಾದರೂ ತಪೋಬಲದಿಂದ ಮಹರ್ಷಿಯಾದನು.

ಕಳ್ಳರಲ್ಲಿ ಪ್ರವೀಣನಾದವನು ಋಷಿಯಾಗಿ ಶ್ರೇಷ್ಠನೆನಿಸಿದನು.

ಪ್ರತಿ ತಿಂಗಳಲ್ಲಿ ಹೊರಡುವ ಪತ್ರಿಕೆಗಳಿಗೆ ಮಾಸಿಕ ಪತ್ರ ಗಳೆನ್ನುವರು.

ಅಣುಜಂತುಗಳಿಂದ ರೋಗವ್ಯಾಪಕವಾಗುವದಂತೆ.

ಆ ಮೇಲೆ ನಿನ್ನ ಗುಣ ಪ್ರಕಟವಾಗಬಹುದು.

೧. ಪ್ರಭಾವಿಯಾಗು, ಬಂಗಾಲಿಭಾಷೆಯಸಾಹಿತ್ಯ ಗಾಯನ ಕಲಿಯುವಲ್ಲಿ ಅನಾಸ್ಥೆ ಪಶ್ಚಿಮನಿಟ್ಟಿನವರು ವಿದ್ಯಾಭಿರುಚಿ (ಯುರೋಪಿಯನರು)

ಮೂರುಸಂಜೆ ವರಕವಿ ಸಮತಾಭಾವ

ಸೊಗಸುಗಾರ ಚಕಿತನಾಗು

## ೩೫. ಘನವಂತನಾದ ಅಶೋಕನು

ನಮ್ಮ ಭರತಖಂಡದಲ್ಲಿ ಚಿರವಾದ ಕೀರ್ತಿಯನ್ನು ಗಳಿಸಿ ಆಳಿದ ರಾಜನೆಂದರೆ ಅಶೋಕಮಹಾರಾಜನು, ಇವನು ಮೌರ್ಯವಂಶದವನು. ಪ್ರಜಾ ಪಾಲನದಕ್ಷನು. ತನ್ನ ಪರಾಕ್ರಮದಿಂದ ರಾಜ್ಯಗಳಿಸಿ ಬೆಳಿಸಿದನು ಅಹಿಂಸೆ, ಸತ್ಯ, ದಯಾ-ಧರ್ಮಗಳು ಇವನಲ್ಲಿ ಮೂರ್ತಿಮತ್ತಾದ ಗುಣ ಗಳಾಗಿದ್ದವು. ಈ ಘನವಂತನ ಚರಿತ್ರೆಯು ಒಳ್ಳೆ ಆದರ್ಶವಾಗಿರುವದರಿಂದ ಅದನ್ನು ಈ ಪಾಠದಲ್ಲಿ ಬರೆಯಲಾಗಿದೆ.

### ಕಠಿಣ ಶಬ್ದಾರ್ಥಗಳು

ನಾಡಗುಡಿ = ರಾಷ್ಟ್ರಧ್ವಜ

ಮುದ್ರೆ = ಪಡಿಯಚ್ಚು

ಪವಿತ್ರ = ಶುದ್ಧ

ಅಗ್ರಗಣ್ಯ = ಶ್ರೇಷ್ಠ

ಮೌರ್ಯವಂಶ = ಮುರಾದೇವಿಯ ಮಗನಿಂದ ನಡೆದು ಬಂದ ಮನೆತನ

ಅನಾಹುತ = ಕೇಡು

ತಲೆದೂಗು = ಒಪ್ಪು

ರಾಜ್ಯಸೂತ್ರ = ರಾಜ್ಯಕಾರಭಾರ

ವಿಶಾಲವಾದ = ವಿಸ್ತಾರವಾದ

ಈಡೇರಿಸು = ಕೊನೆಗಾಣಿಸು

ಎತ್ತುಗಡೆ = ಪ್ರಯತ್ನ

ಮೊಳಗು = ಧ್ವನಿಮಾಡು

ನಾಯಕ = ಒಡೆಯ

ರಭಸ = ಆರ್ಭಟೆ

ಒಂಲುವಿಕೆ = ತಾಪದಿಂದ ಒದರುವದು

ಏರ್ಪಡಿಸು = ಸಿದ್ಧಮಾಡು

| | |
|---|---|
| ಹೆಮ್ಮೆಸು= ಹುರುಪು | ಹಿಂಸಿಸು= ಕೊಲ್ಲು |
| ಕ್ರೂರಕೃತ್ಯ= ಕೆಟ್ಟಕೆಲಸ | ಪ್ರಚಾರ= ಹಬ್ಬುವಿಕೆ |
| ಔಷಧಾಲಯ= ದವಾಖಾನೆ | ಸ್ತಂಭ= ಕಂಬ |
| ಅಹಿಂಸೆ= ಕೊಲ್ಲದೆ ಇರುವದು | ಆದರ್ಶ= ಮಾದರಿ |
| ಅಂಗೀಕರಿಸು= ಸ್ವೀಕಾರಮಾಡು | ಘನವಂತ= ದೊಡ್ಡಿಸ್ತನ ಉಳ್ಳವ |

## ಅಭ್ಯಸನಗಳಿಗೆ ಉತ್ತರಗಳು

೧ ಹಿಂದೆ ಆಗಿ ಹೋದ ಶೂರರ ಹಾಗು ಮಹಾಪುರುಷರ ಚರಿತ್ರ ಕಥೆಗಳನ್ನು ಕೇಳುತ್ತಿದ್ದನು.

೨ 'ಕಾಳಗದಲ್ಲಿ ಗೆಲುವು ಪಡೆಯುವದಿಷ್ಟೇ ನಿನ್ನ ಕೆಲಸವಲ್ಲ, ಆ ಕಾಳಗದಲ್ಲಿ ನಡೆಯುವ ಅನಾಹುತಗಳುಂಟಾಗುವದನ್ನು ತಪ್ಪಿಸುವದೂ ನಿನ್ನ ಕೆಲಸವು.'

೩ ಕಲಿಂಗ ದೇಶದ ಮೇಲೇರಿ ಹೋದದ್ದು ಕೇವಲ ತನ್ನ ರಾಜ್ಯ ಬೆಳೆಸಲು ಮಾತ್ರ.

೪ ಇನ್ನು ನಾನು ಹೆಚ್ಚು ರಾಜ್ಯಗಳಿಸಲು ಒಲ್ಲೆ, ಇದ್ದ ರಾಜ್ಯವನ್ನು ಉಳಿಸಿಕೊಳ್ಳುವೆ.

೫ ಉಳಿದವರು ತನ್ನ ಮಾರ್ಗ ಹಿಡಿಯಬೇಕೆಂದು ಸ್ವತಃ ಬೌದ್ಧ ಧರ್ಮ ಹೊಂದಿದ. ಬೋಧ ಮಾಡಲು ದೇಶಗಳಮೇಲೆ ಪರಿಚಾರಕರನ್ನು ಕಳಿಸಿದನು.

೬ ಕೆರೆ ಬಾವಿಗಳನ್ನು ಕಟ್ಟಿಸಿದ; ಹಾದಿಗೆ ಗಿಡಮರಗಳನ್ನು ನೆಟ್ಟಿಸಿದನು. ಇವಲ್ಲದೆ ಒಳ್ಳೆ ಮಾರ್ಗ ಮಾಡಿಸಿದ, ಊರೂರಿಗೆ ದವಾಖಾನೆಗಳನ್ನಿಡಿಸಿದನು.

೭ ಸೇನಾನಿಯು ವೈರಿಗಳ ಶಿಬಿರದಲ್ಲಿ ಮುನ್ನುಗ್ಗಿದನು.
ಹನಿ ಹನಿ ಕೂಡಿ ಹಳ್ಳವಾಗುವಂತೆ ದ್ರವ್ಯ ಸಂಪಾದಿಸಬೇಕು.
ರಾಮನ ಕಾರ್ಯವು ಸುಗ್ರೀವನಿಂದ ಈಡೇರಿತು.

ಶಾಲೆಯಲ್ಲಿ ಸಮ್ಮೇಲನವನ್ನು ಏರ್ಪಡಿಸಿರುವರು.

ಸೇವಕನು ಒಡೆಯನ ಅಪ್ಪಣೆಯನ್ನು ಅಂಗೀಕರಿಸಿದನು.

ಪಾಲನೆ = ಸಂರಕ್ಷಣೆಮಾಡುವದು
ಎತ್ತುಗಡೆ = ಪ್ರಯತ್ನ
ಅನಾಹುತ = ತಾನಾಗಿ ಉಂಟಾಗುವ ಕೆಡಕು
ಆದರ್ಶ = ಇನ್ನೊಬ್ಬರು ಅನುಸರಿಸಿ ನಡೆಯುವಂತಿರುವ ಸ್ಥಿತಿ (ಮಾದರಿ)
ಘನವಂತ = ದೊಡ್ಡಸ್ತಿಕೆಯುಳ್ಳವ

---

## ೩೬. ಹಂಪೆಯೂ ವಿಜಯನಗರವೂ

ಕನ್ನಡ ನಾಡಿನಲ್ಲಿ ಪ್ರಸಿದ್ಧವಾಗಿರುವ ಕ್ಷೇತ್ರಗಳಲ್ಲಿ ಹಂಪೆಯೊಂದಾಗಿದೆ. ವಿಜಯನಗರದ ರಾಜ್ಯದ ವೈಭವ ಸೂಚಕವಾದ ಕುರುಹುಗಳನ್ನು ಇಲ್ಲಿ ಕಾಣಬಹುದು. ಮನೋಹರವಾದ ದೇವಾಲಯಗಳೂ ಸೃಷ್ಟಿಯ ಸೊಬಗೂ ನೋಡುವವರನ್ನು ಕುತೂಹಲಗೊಳಿಸುವವು. ಇದು ಹಾಳಾದ ಸ್ಥಿತಿಯಲ್ಲಿದ್ದರೂ ಎಂದೂ ಮರೆಯಲಾಗದ ರಾಜ್ಯದಾಡಳಿತೆಯ ಸ್ಮೃತಿಯನ್ನು ತಂದುಕೊಡುವ ಹಂಪೆ-ವಿಜಯನಗರಗಳ ವರ್ಣನೆಯು ಈ ಪಾಠದಲ್ಲಿ ಬರೆದಿದೆ.

### ಕಠಿಣ ಶಬ್ದಗಳ ಅರ್ಥ

ಕ್ಷೇತ್ರ = ಪುಣ್ಯಕರವಾದ ಸ್ಥಾನ
ರಮಣೀಯ = ಮನೋಹರವಾದ
ವಿರೂಪಾಕ್ಷ = ಶಿವನಹೆಸರು (ತ್ರೀನೇತ್ರಗಳು ಆತನಿಗಿದ್ದುದರಿಂದ ವಿರೂಪಾಕ್ಷ ಎಂಬ ಹೆಸರು)
ಮೂಡಣದಿಕ್ಕು = ಪೂರ್ವದಿಕ್ಕು
ಹೆಬ್ಬಾಗಿಲು = ದೊಡ್ಡ ಬಾಗಿಲು
ಅಂತಸ್ತು = ಮೇಲಟ್ಟ
ಗೋಪುರ = ಮಂದಿರದ ಶಿಖರ
ಪ್ರಾಕಾರ = ಪೌಳಿ
ವಿಧ ವಿಧ = ತರ ತರ
ಚೈತ್ರದ ಹುಣ್ಣಿವೆ = ದವನದ ಹುಣ್ಣಿವೆ
ಕೌಶಲ್ಯ = ಜಾಣತನ
ಆಶ್ರಮ = ಋಷಿಗಳ ವಾಸಸ್ಥಳ
ಮಡುವು = ಪ್ರವಾಹದಲ್ಲಿಯ ನೀರಿನ ಗುಂಡಿ
ಬಲಾಢ್ಯ = ಅತಿಶೂರ
ಪರಮಾವಧಿ = ಅಳತೆಮೀರಿ

| | |
|---|---|
| ವಿದ್ವಾಂಸರು = ಪಂಡಿತರು | ಸಂಜ್ಞೆ = ಗುರುತು |
| ವೈಭವ = ಸಡಗರ | ಅಗಸಗಿತ್ತಿ = ಅಗಸರವನಹೆಂಡತಿ |
| ವ್ಯಸನ = ಮನಸ್ಸಿನ ಕಾತರತೆ | ಗರಡೀಮನೆ = ಶರೀರಬಲದ ವ್ಯಾಯಾಮಕ್ಕಾಗಿ ಕಟ್ಟಿಸಿದ ಮನೆ |
| ಮಹಾಲು = ಮೇಲ್ಮನೆ | |
| ಅಷ್ಟದಿಗ್ಗಜ=ಎಂಟು ದಿಕ್ಕಿನ ಆನೆ | |

## ಅಭ್ಯಸನಗಳ ಉತ್ತರಗಳು

೧ ಹಂಪೆಯಲ್ಲಿ 'ಶ್ರೀ ವಿರೂಪಾಕ್ಷ' ದೇವರ ಗುಡಿಯು ಮುಖ್ಯ.

೨ ಗುಡಿಯ ಗೋಪುರವು ಹನ್ನೊಂದು ಅಂತಸ್ತುಗಳುಳ್ಳದ್ದು.

೩ ಪಾಠದಲ್ಲಿ ಹೇಳಿದೆ.

೪ ಗುಂಜಿ ಮಾಧವನಗುಡಿ, ಉದ್ದಾನ ವೀರಭದ್ರನಗುಡಿ, ಸೀತೆಯ ಗುಡಿ, ಇವು ಗುಡಿಗಳು.

ನೋಡತಕ್ಕಂತ ಸ್ಥಳ:— ಸಾಸಿವೆಗಣಪ, ಕಡಲೆಯಗಣಪ, ವಸಿಷ್ಠನ ಆಶ್ರಮ, ಉಗ್ರನರಸಿಂಹ, ಬಡವೀಲಿಂಗ, ಸೀತಾಕುಂಡ, ಸೀತೆಯ ಸೆರಗು, ಅಕ್ಕತಂಗಿಯರಕಲ್ಲು, ಮತ್ತು ಚಕ್ರತೀರ್ಥಗಳು ಅಲ್ಲದೆ ವಿಜಯ ನಗರದ ಹಾಳುಪಟ್ಟಣವೂ, ಅಲ್ಲಿಯ ಕುರುಹುಗಳೂ.

೫ ತುಂಗಭದ್ರೆ ನದಿಯಲ್ಲಿಯ ತಿರುಗಣೀಮಡವಿಗೆ ಚಕ್ರತೀರ್ಥ ವೆಂಬ ಹೆಸರು.

೬ ವಿಜಯನಗರದ ಕೃಷ್ಣದೇವರಾಯನ ಆಳಿಕೆಯಲ್ಲಿ ವಿಜಯನಗರ ರಾಜ್ಯ ಘನತೆಗೇರಿತು.

೭ ವಿಜಯನಗರದ ರಾಜ್ಯವು ರಾಮರಾಜನ ಆಳಿಕೆಯಲ್ಲಿ ಹಾಳಾ ಯಿತು.

೮ ವಿಜಯವಿಠ್ಠಲನಗುಡಿ, ಮಂಚದಉಪ್ಪರಿಗೆ, ಗಾಣಗಿತ್ತಿಯ ಮಹಾಲು, ಅಗಸಗಿತ್ತಿಯಮಹಾಲು, ಕುಮಾರರಾಮನ ಗರಡೀಮನೆ; ಗಜಶಾಲೆ (ಆನೆಗಳಮನೆ), ಅಶ್ವಶಾಲೆ (ಕುದುರೆಗಳಮನೆ) ಇವೆಲ್ಲ ಇಮಾರತು ಗಳು ಕಣ್ಣಿಗೆ ಬೀಳುವವು. ಇವೆಲ್ಲ ಇಮಾರತಗಳು ಹಾಳಾಗಿ ಕುರುಹುಗಳು ಮಾತ್ರ ತೋರುವವು.

# ೩೭. ಜ್ಞಾನೇಶ್ವರ

ಈ ಪಾಠದಲ್ಲಿ ಧರ್ಮದಿಂದ ಬಹಿಷ್ಕೃತನೆಂದು ಸಮಾಜವು ತಿಳಿದ ಒಬ್ಬ ಮನುಷ್ಯನು ತನ್ನ ದೈವೀಪ್ರಭಾವದಿಂದ ವಿಖ್ಯಾತನಾದವನ ಚರಿತ್ರೆ ಬರೆದಿದೆ. ಆತನೇ ಜ್ಞಾನೇಶ್ವರನು. ಇವನ ತಂದೆಯು ಸನ್ಯಾಸಾಶ್ರಮ ದಿಂದ ಹಿಂದಿರುಗಿ ಹೆಂಡತಿಯನ್ನು ಕೂಡಿ ಗೃಹಸ್ಥನಾದನು. ಅನಂತರ ಈ ಜ್ಞಾನೇಶ್ವರ ಹಾಗು ನಿವೃತ್ತಿ, ಸೋಪಾನ, ಮುಕ್ತಾಬಾಯಿ ಇವರು ಅವನಿಂದ ಜನಿಸಿದರು. ಇವರಲ್ಲಿ ಜ್ಞಾನೇಶ್ವರನು ಸಂತನೆಂದು ಹೆಸರಾಗಿ ಅಘಟಿತ ಕ್ರಿಯೆಗಳನ್ನು ಮಾಡಿದನಲ್ಲದೆ ಭಗವದ್ಗೀತೆಗೆ ಪಂಡಿತರು ಒಪ್ಪುವಂತೆ ಟೀಕೆ ಬರೆದಿರುವನು. ಕೊನೆಗೆ ಆಳಂದಿಯಲ್ಲಿ ದೇಹವಿಟ್ಟನು.

## ಕಠಿಣ ಶಬ್ದಾರ್ಥಗಳು

ದಂಪತಿ = ಗಂಡಹೆಂಡಿರ ಜೋಡು
ತೀರ್ಥ = ಪವಿತ್ರ ಜಲಾಶಯವುಳ್ಳ ಸ್ಥಾನ
ಸನ್ಯಾಸ = ವೈರಾಗ್ಯ
ತವರೂರು = ಹೆಂಗಸರಿಗೆ ಅವರ ತಾಯಿತಂದೆಗಳ ಊರೇ ತವರೂರು ಎಂಬ ಹೆಸರು
ನಿವೇದಿಸು = ಹೇಳಿಕೊಡು
ಮುಂದುವರಿಸು = ಸಾಗಿಸು
ಮೇಧಾವಿ = ಬುದ್ಧಿವಂತ
ಶುದ್ಧ = ಪವಿತ್ರ
ಮನಗಾಣಿಸು = ಮನಸಿಗೆ ಗೊತ್ತುಮಾಡಿಸಿಕೊಡು
ನಿರೂಪಣೆ = ಸ್ಪಷ್ಟವಾದ ಹೇಳಿಕೆ
ಸ್ವೀಕರಿಸು = ತಕ್ಕೊಳ್ಳು
ಮಾನ್ಯ = ಒಪ್ಪಿಗೆ
ಬಹಿಷ್ಕಾರ = ಸಮಾಜದ ಬಳಿಕೆಯಿಂದ ದೂರುಮಾಡುವದು
ಮುಂಜಿ = ಉಪನಯನ ವಿಧಿ
ಸಹಪಂಕ್ತಿ = ಕೂಡಿ ಉಣ್ಣುವದು
ಮಧುಕರಿ = ಮನೆ ಮನೆ ತಿರುಗಿ ಅನ್ನ ಸಂಗ್ರಹಿಸುವದು
ಜ್ಞಾನಿ = ಬುದ್ಧಿವಂತ
ಸಾಷ್ಟಾಂಗ = ಎಂಟು ಅಂಗಗಳಿಂದ ಕೂಡಿ
ಪರಸ್ಪರ = ಅನ್ಯೋನ್ಯ
ಸಂದರ್ಭ = ಪ್ರಸಂಗ
ಅಭಂಗ = ನಾಶವಾಗದ (ಯಾವಾಗಲೂ ಇರುವ)

ಶುದ್ಧಿಪತ್ರ = ಪವಿತ್ರವನ್ನಾಗಿ ಮಾಡಿದ ಬಗ್ಗೆ ಧರ್ಮ ಗುರುವು ಬರೆದುಕೊಟ್ಟ ಲೇಖ
ಅವತಾರ = ಒಂದು ರೂಪದಿಂದ ಇನ್ನೊಂದು ರೂಪ ಪಡೆ ಯುವದು
ಶ್ಲೋಕ = ಕವಿತೆಗಳು
ಮಹಾರಾಜ = ದೊಡ್ಡವ ಎಂಬರ್ಥ
ಆಖ್ಯಾಯಿಕೆ = ಹೇಳುತ್ತಬಂದ ಸಂಗತಿ
ಪವಾಡ = ಆಗದ್ದನ್ನು ಆಗುವಂತೆ ಮಾಡುವ ಶಕ್ತಿ
ಸಮಾಧಿ=ಶವವನ್ನುಹೂಳುವತಗ್ಗು
ಸಾರ್ಥಕ = ಉಪಯೋಗ
ಆಸನ ನಿರ್ಮಿಸಿ = ಗದ್ದುಗೆ ಹಾಕಿ
ಶುಭ್ರ = ಬಿಳಿಯ
ಹೊತ್ತಿಗೆ = ಗ್ರಂಥ
ಎರಗು = ನಮಸ್ಕರಿಸು
ಧ್ಯಾನಸ್ಥ = ಸ್ಮರಣೆಯುಳ್ಳವ
ಶಿಲೆ = ಕಲ್ಲು
ಅತಿಶಯುಮನ್ನಣೆ=ಬಹಳ ಮರ್ಯಾದೆ

## ಅಭ್ಯಸನಗಳ ಉತ್ತರಗಳು

೧ ತಂದೆ-ವಿಠ್ಠಲಪಂತ, ತಾಯಿ-ರುಕ್ಮಿಣೀಬಾಯಿ.

೨ ಸನ್ಯಾಸಾಶ್ರಮ ಪಡೆದ ವಿಠ್ಠಲಪಂತನು ಆ ಆಶ್ರಮತ್ಯಾಗ ಮಾಡಿದ್ದರಿಂದ.

೩ ಜ್ಞಾನೇಶ್ವರಿ ಮತ್ತು ಭಗವದ್ಗೀತೆಯ ಟೀಕೆ ಹಾಗು ಅಮೃತಾನುಭವ.

೪ ಜ್ಞಾನೇಶ್ವರನಿಗೆ ಶ್ರೀಪಾದ ಸ್ವಾಮಿಗಳ ದರ್ಶನವಾಯಿತು.

೫ ಜ್ಞಾನೇಶ್ವರರ ಪವಾಡುಗಳು:—

೧ ಕೋಣನಿಂದ ವೇದ ನುಡಿಸಿದರು.

ನಿರ್ಜೀವ ಗೋಡೆಯನ್ನೇರಿ ನಡೆಸುತ್ತ ಹುಲಿಯನ್ನೇರಿ ಬರುವ ಚಾಂಗದೇವನನ್ನು ಕಂಡದ್ದು.

೬ ಜ್ಞಾನೇಶ್ವರರು ಅಲ್ಲಿ ತಮ್ಮ ದೇಹ ವಿಟ್ಟುದರಿಂದ.

೭ ಗೌರೀಶಂಕರ ಕಂಪನಿಯವರು ತೀರ್ಥಯಾತ್ರೆಗೆ ಹೋಗುವವರಿಗೆ ವ್ಯವಸ್ಥೆ ಮಾಡುವರು.

ಪ್ರಪಂಚಕ್ಕೆ ಬೇಸತ್ತು ಸನ್ಯಾಸದೀಕ್ಷೆ ಪಡಿಯುವವನು ಮಹಾಮೂರ್ಖನು.

ದೇಶಭಕ್ತರೆನ್ನಿಸಿದರೂ ಪರದೇಶದ ಬಟ್ಟೆಗೆ ಬಹಿಷ್ಕಾರವನ್ನಿಕ್ಕಲಿಲ್ಲ.

ಬಸವಣ್ಣನವರ ಪವಾಡಗಳನ್ನು ಕಾಣಬಹುದಾಗಿತ್ತು.

ನೂರೈವತ್ತು ಹಡಗದ ಮೇಲಿನ ಖಲಾಸಿಗಳ ಜಲಸಮಾಧಿಯಾಯಿತು.

ಪೂಜಾರಿಯು ನೀರಾಂಜನದಿಂದ ದೇವರಿಗೆ ಆರತಿ ಬೆಳಗಿದನು.

ಸಿ. ರಾಮನ್‌ರೆಂಬ ಮೇಧಾವಿಗಳು ಕನ್ನಡ ನಾಡಿನ ಕೀರ್ತಿ ತಂದರು.

ಜೇನುಹುಳುಗಳಂತೆ ಅನ್ನ ಸಂಗ್ರಹಿಸುವದೇ ಮಧುಕರಿಯೆನಿಸುವದು.

೮ ೧ ವಿಠ್ಠಲ ಪಂತರಿಗೆ ದೇವರು, **ಧರ್ಮ** ಇವುಗಳ ಕಡೆಗೆ **ಒಲವು** ಇತ್ತು.

೨ **ಸಹಪಂಕ್ತಿಗೆ** ಅವರನ್ನು ಯಾರೂ ಕೂಡಿಸಿಕೊಳ್ಳದಾದರು.

೩ ಜ್ಞಾನದೇವನು **ಮಧುಕರಿಯನ್ನು** ಬೇಡಿಕೊಂಡು ಬಂದು ಎಲ್ಲರನ್ನು ಜೋಪಾನ ಮಾಡುತ್ತಿದ್ದನು.

---

# ೩೮. ಹೊಟ್ಟೆಯೂ ಅವಯವಗಳೂ

"ಮಾತುಬಲ್ಲವ ಮಾಣಿಕತಂದ; ಮಾತನರಿಯದವ ಜಗಳತಂದ" ಎಂಬ ಗಾದೆಯು ಮಾತಿನ ಸ್ಪಷ್ಟತೆಗಾಗಿ ಈ ಪಾಠವು ಒಳ್ಳೆ ಉದಾಹರಣೆಯಾಗಿದೆ, ರೋಮ ಸರಕಾರಕ್ಕೆ ದುಡ್ಡಿನ ಕೊರತೆಯಾದಾಗ ಪ್ರಜೆಗಳಿಗೆ ಏನು ಹೇಳಿದರೂ ದುಡ್ಡು ಕೊಡಲೊಲ್ಲರು. ಆಗ ಸರಕಾರದವರು ಒಬ್ಬ ಜಾಣ ಅಧಿಕಾರಿಯನ್ನು ಪ್ರಜೆಗಳಿಂದ ದುಡ್ಡು ಎತ್ತಲಿಕ್ಕೆ ಕಳಿಸಿದರು. ಆ ಅಧಿಕಾರಿಯು ತನ್ನ ಮಾತಿನ ಚತುರತೆಯಿಂದ ಪ್ರಜೆಗಳಿಗೆ 'ಹೊಟ್ಟೆಯೂ ಅವಯವಗಳೂ' ಎಂಬ ಕತೆ ಹೇಳಿ ಪ್ರಜೆಗಳಿಂದ ಹಣ ಎತ್ತಿದನು. ಆ ಕತೆಯೇ ಈ ಪಾಠದಲ್ಲಿ ಬರೆದಿದೆ.

## ಕಠಿಣ ಶಬ್ದಾರ್ಥಗಳು

ಅವಯವ=ಶರೀರದ ಭಾಗ
ಪ್ರಯಾಸಪಡು=ಶ್ರಮಮಾಡಿ
ಅನ್ಯಾಯ=ಒಳಿತಲ್ಲದ್ದು
ರುಚಿ=ಸವಿ
ಆವೇಶ=ಹುರುಪು
ಸೈ ಸೈ=ಹೌದು ಹೌದು
ಖಂಡಿತ=ನಿಶ್ಚಯ
ಪೋಷಣ=ರಕ್ಷಣ
ಬಲಹೀನ=ದುರ್ಬಲ
ಅನರ್ಥ=ಕೇಡು
ಅಶಕ್ತ=ಬಲವಿಲ್ಲದ
ಗತಿ=ಪರಿಣಾಮ

## ಅಭ್ಯಸನಗಳ ಉತ್ತರಗಳು

೧ ರೋಮ ಪಟ್ಟಣದ ಯುದ್ಧದ ಪ್ರಸಂಗದ ಕಥೆಯಿದು.

೨ ಸರಕಾರಕ್ಕೆ ಹಣದ ಕೊರತೆಯಾಯಿತು. ಆದಕ್ಕಾಗಿ ಸರಕಾರವು ಪ್ರಜೆಗಳನ್ನು ಕೇಳಬೇಕಾಯಿತು.

೩ ಸರಕಾರಕ್ಕೆ ಹಲವು ಸಾರೆ ಹಣ ಕೊಟ್ಟು ಬೇಸತ್ತಿದ್ದರಾದ್ದರಿಂದ.

೪ ಹಣ ವಸೂಲಿಗಾಗಿ ಒಬ್ಬ ಅಧಿಕಾರಿಯನ್ನು ಕಳಿಸಿದರು.

೫ ಹೊಟ್ಟೆಯಮೇಲೆ ಅವಯವಗಳು ಸಿಟ್ಟಾಗಿ ದುಡಿಯುವದನ್ನು ಬಿಟ್ಟು ತಾವೂ ಹೊಟ್ಟೆಯೂ ಕೂಡ ನಾಶವಾದವು. ಎಂಬ ಕಥೆಯನ್ನು ಹೇಳಿದನು.

೬ ಹೊಟ್ಟೆಗೂ ಅವಯವಗಳಿಗೂ ಸಂಬಂಧವಿದ್ದಂತೆ ರಾಜನಿಗೂ (ಸರಕಾರಕ್ಕೂ) ಪ್ರಜೆಗಳಿಗೂ ಸಂಬಂಧವಿರುವದರಿಂದ ಈ ಪಾಠಕ್ಕೆ ಕೊಟ್ಟ ಹೆಸರು ಯೋಗ್ಯವಿದೆ.

ಚಿತ್ತಗೊಡು=ಲಕ್ಷ್ಯಕೊಡು
ಪ್ರಯಾಸಪಟ್ಟು ದುಡಿ=ಶ್ರಮಮಾಡಿ ದುಡಿ
ಸಂಪಾದಿಸು=ಗಳಿಸು
ನೆನಿಸು=ತಿರುತಿರುಗಿ ಮನಸಿನಲ್ಲಿ ತರು

# ೩೯. ಶಿವನ ಮೆಚ್ಚುಗೆ

## (ಕವಿತೆ-ಪದ)

ಸರ್ಪಭೂಷಣ ಶಿವಯೋಗಿಗಳೆಂಬವರು (ಇವರಿಗೆ ಸಪ್ಪಣ್ಣಪ್ಪನವರು ಎಂದೂ ಅನ್ನುವರು.) ಪರಾತ್ಮಧ್ಯಾನದಿಂದ ಮಗ್ನರಾಗಿ ಹಾಡಿದ ಹಾಡು ಇದು. ಒಳ್ಳೆ ಬೋಧೆಯಾಗಿರುವದು ಕನ್ನಡ ನಾಡಿನ ತುಂಬೆಲ್ಲ ಅವರ ಪದಗಳು ಮೆಚ್ಚುಗೆ ಪಡೆದಿವೆ. ಈ ಪಾಠದಲ್ಲಿ ಅವರು ರಚಿಸಿದ "ಶಿವನ ಮೆಚ್ಚುಗೆ" ಎಂಬ ಒಂದು ಪದವನ್ನು ಆರಿಸಿದೆ.

### ಸರಳಾನುವಾದ

ಎಲೈ ಮರುಳೆ! ನಿನ್ನ ಹೊರಗಿನ ಡೌಲು ಬಿಡು, ಮನಸ್ಸಿನಲ್ಲಿ ಯಾವಾಗಲೂ ಶಿವನನ್ನು ಸ್ಮರಿಸುತ್ತ ಇರು. ನಿನ್ನಲ್ಲಿ ಅನ್ಯರನ್ನು ಮರುಳು ಮಾಡುವ ಮೋಸಗಾರಿಕೆಯನ್ನಿಟ್ಟುಕೊಂಡು ಹೊರಗೆ ಕೀರ್ತಿಯನ್ನು ಪಡೆಯಲು ನೀನು ಬಯಸಿದರೆ ದೇವ ನಿನಗೆ ಮೆಚ್ಚುವದಿಲ್ಲ ||

> ಜನರ ಮನಸ್ಸಿಗೆ ಒಪ್ಪಿತವಾಗುವಂತೆ ನೀನು ನಡೆದರೆ ನಿರುಪಯೋಗ,
> ಮನಸು ಒಪ್ಪುವಂತೆ ನಿನ್ನ ವರ್ತನವಿದ್ದರೆ ಅದು ಶೋಭೆಯು,
> ಅಂತರಂಗದ ಸ್ಥಿತಿಯು ಜನರಿಗೆ ಗೊತ್ತಾಗುವದಿಲ್ಲ ಎಲ್ಲವನ್ನೂ
> ಮನಸ್ಸು ಕಾಣುವದು || ೧ ||

ಒಂದು ವೇಳೆ ಜನರು ಮೆಚ್ಚಿದರೆ ನಿನ್ನನ್ನವರು ಕೈಲಾಸಕ್ಕೆ ಮುಟ್ಟಿಸುವದಿಲ್ಲ; ಅವರು ಅದಕ್ಕೆ ಒಪ್ಪದಿದ್ದರೂ ದೇವರು ನಿನ್ನನ್ನು ಕೈಲಾಸಕ್ಕೆ ಒಯ್ಯುವದಿದ್ದರೆ ಬಿಡುವನೇ (ಇಲ್ಲ) ಜನರು ನಿನಗೆ ದೊಡ್ಡವನೆಂದರೆ ಸರ್ವ ವ್ಯಾಪಿಯಾದ ದೇವರು ಎಲ್ಲವನ್ನೂ ತಿಳಿಯುವನು. ಶಿವನು ನಿನ್ನ ಮನಸ್ಸಿನಲ್ಲಿ ಮನೆಮಾಡಿಕೊಂಡು ಇರುವನು (ಆದ್ದರಿಂದ) ಮನಸ್ಸು ಮೆಚ್ಚಿ ನಡೆಯದೆ ಜನರಿಗೆ ಅಂಜಿ ನಡೆದರೆ ಮನಸ್ಸಿನ ಒಡೆಯ ಗುರುಸಿದ್ಧ (ದೇವರು)ನು ಕಾಣದಾಗುವನು.

## ಕಠಿಣ ಶಬ್ದಾರ್ಥಗಳು

ಬ್ಯಾಹೆ = ಹೊರಗಿನ
ಡಂಭ = ಡೌಲು
ಮಾನಸ = ಮನಸ್ಸು
ಎಡೆ = ಸ್ಥಾನ
ಒಡಲು = ಹೊಟ್ಟೆ
ವಂಚಿಸಿ = ಮೋಸಮಾಡಿ
ಒಲಿವನು = ಮೆಚ್ಚುವನು ||ಪಲ್ಲ||
ಕೃತ್ಯ = ಕೆಲಸ

ಅರಿಯದ = ತಿಳಿಯದ ೧
ಕೈಲಾಸ = ಮೋಕ್ಷಸ್ಥಾನ
ಮೆಚ್ಚು = ಪ್ರಸನ್ನನಾಗು
ಚಿನುಮಯ=ಆತ್ಮದಲ್ಲಿತುಂಬಿದ ೨
ಮನಕಂಜಿ = ಮನಸಿಗೆ ಹೆದರಿ
ಮನದಾಣ್ಮ = ಮನಸ್ಸಿನ ಒಡೆಯ
ಮರೆಯಾಗು = ಕಾಣದಂತಾಗು ೩

## ಅಭ್ಯಸನೆಗಳ ಉತ್ತರಗಳು

೧ ತನ್ನ ಮನಸು ಮೆಚ್ಚುವಹಾಗೆ ಆಚರಣೆಯಿರಬೇಕು.
೨ ಶಿವನು ಮನಸ್ಸಿನಲ್ಲಿ ಮನೆ ಮಾಡಿಕೊಂಡು ಇರುವನು.
೩ ಮನಕ್ಕೆ ಅಂಜಿ ನಡೆಯುದಿದ್ದರೆ ದೇವರು ಮರೆಯಾಗುವನು.

ಚಿನುಮಯ = ಚಿತ್ತದಲ್ಲಿ ವ್ಯಾಪಿಸಿದ (ತುಂಬಿದ)
ಮನದಾಣ್ಮ = ಮನಸ್ಸಿನ ಒಡೆಯ
ವಂಚಿಸು=ಮೋಸ (ಕಪಟ) ಮಾಡು

---

# ೪೦. ಜೇನು ನೊಣಗಳು

ಜಗತ್ತಿನಲ್ಲಿ ನಮಗೆ ಉಪಯೋಗ ಬೀಳುವ ಇತರ ಪ್ರಾಣಿಗಳ ಜೀವನ ವೃತ್ತಾಂತವನ್ನು ನಾವು ತಿಳಿದುಕೊಂಡರೆ ಅದರಿಂದ ನಮಗೆ ಎಷ್ಟೋ ಬೋಧೆಯಾಗುವಂತಿದೆ. ಈ ಜೇನುನೊಣಗಳ ಜೀವನದಿಂದ ನಾವು ಅನೇಕ ಗುಣಗಳನ್ನು ಗ್ರಹಿಸಿ ನಮ್ಮ ವೃತ್ತಿಯಲ್ಲಿ ಸುಧಾರಿಸಿಕೊಳ್ಳಬಹುದು. ಆ ಜೇನುಹುಳುವಿನ ಜೀವನದ ಒಗ್ಗೆ ಈ ಪಾಠದಲ್ಲಿ ಬರೆದಿದೆ.

## ಕಠಿಣ ಶಬ್ದಾರ್ಥ

ಹುಟ್ಟು = ಜೇನುಹುಳುಗಳು ರಚಿಸಿಕೊಂಡ ಮನೆ
ಸೋಜಿಗ = ಆಶ್ಚರ್ಯ
ಸಂಗ್ರಹಿಸು = ಕೂಡುಹಾಕು
ತರಗತಿ = ಪ್ರಕಾರ
ಹೆತ್ತ = ಹಡೆದ
ಮೇಲಾಟ = ಸ್ಪರ್ಧೆ
ವಿಧವಾ = ಗಂಡಸತ್ತವಳು
ದಾಸಿ = ಸೇವಿಕೆ
ಪ್ರಸಂಗ = ವೇಳೆ
ಸುತ್ತಾಡಿ = ತಿರುಗಾಡಿ
ಶವಗಳು = ಹೆಣಗಳು
ಕರ್ತವ್ಯ = ಮಾಡತಕ್ಕ ಕೆಲಸ
ದಕ್ಷತೆ = ಮನಸ್ಸುಕೊಟ್ಟು ಕೆಲಸ ಮಾಡುವದು
ಮಧು = ಸಿಹಿರಸ
ಪರಾಗ = ಹುಡಿ
ಉತ್ಪನ್ನ = ಹುಟ್ಟುವಳಿ

## ಅಭ್ಯಸನೆಗಳಿಗೆ ಉತ್ತರಗಳು

೧ ನಾಲ್ಕು ಜಾತಿಯ (ಪ್ರಕಾರದ) ಜೇನು ನೊಣಗಳಿವೆ.

೨ 'ತುಡವೆ' ಎಂಬ ಜಾತಿಯ ಜೇನ ನೊಣವು ನಮಗೆ ಉಪಯುಕ್ತವಾದುದು.

೩ ಹೆಣ್ಣು ಜೇನ್ನೊಣವು ಎಲ್ಲ ನೊಣಗಳ ಶಕ್ತಿ ಪ್ರದರ್ಶನದಿಂದ ತನಗೆ ಬಲಿಷ್ಠವೆಂದು ಕಂಡುಬಂದುದನ್ನು ವರಿಸುವದು.

೪ ಒಂದು ಹುಟ್ಟಿನಲ್ಲಿ ಒಂದೇ ರಾಣಿಯಿರುವದು.

೫ ಅವುಗಳಿಂದ ನಾವು ಸಹಕಾರ ಬುದ್ಧಿಯನ್ನು ಕಲಿಯಬಹುದು. ಅಲ್ಲದೆ ಪ್ರೇಮ, ಕರ್ತವ್ಯದಕ್ಷತೆ, ಕೆಲಸದ ಶ್ರಮವಿಭಜನೆ, ಇವೆಲ್ಲವುಗಳಿಂದ ಅವುಗಳ ಜೀವನವು ನಮಗೆ ಮಾದರಿಯದಾಗಿರುವದರಿಂದ ಮಹತ್ವದ್ದೆಂದು ತಿಳಿಯುವದು.

# ೪೧. ಬೆಳವಡಿಯ ಮುತ್ತಿಗೆ

ನಮ್ಮ ಕನ್ನಡನಾಡಿನಲ್ಲಿ ಬಹುಜನ ಶೂರ ಪುರುಷರು ಪ್ರಸಿದ್ಧರಾಗಿ ಹೋದರು. ಅದರಂತೆ ಎಷ್ಟೋ ಜನ ಸ್ತ್ರೀಯರು ತಮ್ಮಲ್ಲಿಯ ಶ್ರೇಷ್ಠವಾದ ಶೌರ್ಯ ಗುಣದಿಂದ ಇತಿಹಾಸದಲ್ಲಿ ಹೆಸರು ಉಳಿಸಿಕೊಂಡು ಪೂಜ್ಯತೆ ಪಡೆದ ರೆಂಬುದಕ್ಕೆ ಬೆಳವಡಿ ದೇಸಾಯಿಣಿ ಮಲ್ಲಮ್ಮನ ಉದಾಹರಣೆಯೇ ಸಾಕ್ಷಿ ಯಾಗಿದೆ.

ಮರಾಠಾ ರಾಜ್ಯದ ಅಧಿಪತಿ ಶಿವಾಜಿಯ ಸೈನ್ಯದವರು ಬೆಳವಡಿಗೆ ಮುತ್ತಿಗೆ ಹಾಕಿದ ಕಾಲಕ್ಕೆ ಅವರನ್ನು ಹಣಿದು ಶಿವಾಜಿ ಮಹಾರಾಜನನ್ನು ದಂಗು ಬಡಿಸಿದ ವೀರರಮಣಿ ಮಲ್ಲಮ್ಮನ ಚರಿತ್ರೆಯು ಈ ಪಾಠದಲ್ಲಿ ಹೇಳಿರುತ್ತದೆ.

## ಕಠಿಣ ಶಬ್ದಾರ್ಥಗಳು

ಈಶಪ್ರಭು=ಬೆಳವಡಿ ಸಂಸ್ಥಾನಿಕನ ಹೆಸರು (ಮಲ್ಲಮ್ಮನ ಪತಿರಾಜನು)
ಚೊಕ್ಕಟ=ಒಳ್ಳೆ ಶಿಸ್ತುವುಳ್ಳದ್ದು
ವೀರಶೈವರು=ಶಿವನಲ್ಲಿ ಮೇಲಾದ ಭಕ್ತಿಯುಳ್ಳವರು.
ಘೋಷಣೆ=ಧ್ವನಿಯು
ಕೊತ್ತಲ=ಕೋಟೆಯ ಬುರುಜು
ಹುರುಪು=ಆವೇಶ
ವಿಶ್ವಾಸ=ನಂಬಿಗೆ
ರಭಸ=ಆರ್ಭಟಿ
ಚದರು=ಚಲ್ಲಾಪಿಲ್ಲಿಯಾಗು
ಜಯಘೋಷ=ಗೆಲವಿನ ಉತ್ಸಾಹ ದಿಂದ ಒದರುವಿಕೆ
ವಾರ್ತೆ=ಸುದ್ದಿ
ಕೆಂಧೂಳು=ಕೆಂಪು ಹುಡಿ
ಆಸ್ತಿ=ಬದುಕು
ಭದ್ರವಾಗಿ=ಸುರಕ್ಷಿತವಾಗಿ
ಮಿಂಚಿನ ವೇಗ=ತೀವ್ರಗತಿ
ಸಾಹಸಕೃತಿ=ಶೂರತನದ ಕೆಲಸ
ಊಹಿಸಿ=ತರ್ಕಮಾಡಿ
ತತ್‌ಕ್ಷಣ=ಆ ಕೂಡಲೆ
ಬೊಟ್ಟುಕಚ್ಚು=ಬೆರಗಾಗು
ಪಾದಚಾರಿಣಿ=ಕಾಲ್ನಡಿಗೆಯಿಂದ ನಡೆಯುವವಳು
ಹತಾಶಳಾಗಿ=ನಿರುಪಾಯಳಾಗಿ
ಮೈಮರೆತು=ಎಚ್ಚರದಪ್ಪಿ
ವೀರರಮಣಿ=ಶೂರನ ಹೆಂಡತಿ ಹಾಗು ಶೂರ ಹೆಂಗಸು ಇವೆರಡೂ ಅರ್ಥ
ಉಡುಗೊರೆ=ಮರ್ಯಾದೆಗೆ ಕೊಟ್ಟ ವಸ್ತ್ರ
ಉಂಬಳಿ=ಉಪಭೋಗಿಸಲು ಕೊಟ್ಟ ಊರು
ಔದಾರ್ಯ=ಉದಾರತನ

## ಅಭ್ಯಸನಗಳಿಗೆ ಉತ್ತರಗಳು

೧ ಈಶಪ್ರಭುವು–ಬೆಳವಡಿಯ ಅರಸು; ಮಲ್ಲಮ್ಮನು–ಬೆಳವಡಿಯ ಅರಸಿಯು.

೨ ಬೆಳವಡಿಯ ಮೇಲೆ ಶಿವಾಜಿಯ ಸೈನಿಕರು (ಶಿವಾಜಿಯೆಂದರೂ ಅಡ್ಡಿಯಿಲ್ಲ.)

೩ ಶಿವಾಜಿಯ ಸೇನೆಯ ಅಧಿಪತಿ ಮಹಾಡದ ದಾದಾಜಿ ಎಂಬವನಿದ್ದನು.

೪ 'ನೀವು ನಮ್ಮ ಶಿವಾಜಿಗೆ ಶರಣು ಬರಬೇಕು' ಎಂಬದಾಗಿ ಬರೆದನು.

೫ ಈಶಪ್ರಭುವು ಶಿವಾಜಿಯ ಕಡೆಯಿಂದ ಬಂದ ಪತ್ರವನ್ನು ಮನ್ನಿಸಲಿಲ್ಲ. ಆದ್ದರಿಂದ ದಾದಾಜಿಯು ತನ್ನ ದಂಡಿನವರಿಗೆ ಕೋಟೆ ಮುತ್ತಲು ಹೇಳಿದನು.

೬ ಶಿವಾಜಿಯ ದಂಡಿನವನೊಬ್ಬನು ಕೋಟೆಯಲ್ಲಿ ಸೇರಿ ಬೆಂಕಿ ಹಚ್ಚಿದ್ದರಿಂದ ಹಾ ಹಾ ಕಾರವೆದ್ದಿತು.

೭ ಪ್ರಜ್ವಲಿಸುವ ಬೆಂಕಿಯನ್ನು ನಂದಿಸಲು ತನ್ನ ಸೈನಿಕರನ್ನು ಕಳೆ ಹಾಕಿದನು.

೮ ಪತಿಯ ಮರಣದಿಂದ ಮಲ್ಲಮ್ಮನಲ್ಲಿ ವೀರಾವೇಶ ತುಂಬಿ ಶಿವಾಜಿಯ ಸೈನಿಕರೊಡನೆ ಕುದುರೆಯೇರಿ ಯುದ್ಧಕ್ಕೆ ಅಣಿಯಾದಳು.

೯ ಶಿವಾಜಿಯು ಮಲ್ಲಮ್ಮನಿಗೆ–' ನಿಮ್ಮಂಥ ಶೂರ ಸ್ತ್ರೀಯರು ಭರತ ಭೂಮಿಯನ್ನು ಉದ್ಧಾರ ಮಾಡಲು ಅವಶ್ಯ ಬೇಕು. ನಿಮ್ಮಂಥವರೇ ಭೂಷಣ' ಎಂದನು.

ಶಿವಾಜಿಯು ಮಲ್ಲಮ್ಮನನ್ನು ಬಾಯ್ತುಂಬ ಹೊಗಳಿ ತಕ್ಕ ಮರ್ಯಾದೆ ಮಾಡಿದನು.

ತನ್ನ ಸಹೋದರಿ ಎಂದು ಉಡುಗೊರೆ ಕೊಟ್ಟನು. ಉಂಬಳಿಗಾಗಿ ಕೆಲವು ಪ್ರದೇಶ ಬಿಟ್ಟನು.

೧೦ 'ಮಲ್ಲಮ್ಮನ ಬಗ್ಗೆ ನಿಬಂಧ' ಇಡೀ ಪಾಠವನ್ನು ಓದಿ ಬರೆಯಿರಿ.

೧೧ ಪ್ರಜ್ವಲಿಸಿದ ಬೆಂಕಿ ದಣಗುಟ್ಟಿ ಉರಿಯಿತು.
ವೈರಿಗಳು ಕಂಗೆಟ್ಟು ದಿಕ್ಕಾಪಾಲಾದರು.
ಮಾರುತಿಯು ರಭಸದಿಂದ ಲಂಕೆಯು ನಡುಗಿತು.
ಲಂಕಾದಹನ ನಡೆಯಲು ವಾನರರಲ್ಲಿ ಹಾಹಾ ಕಾರ ನಡೆಯಿತು.
ಲಂಕೆ ಸುಡಹತ್ತಿದ ವಾರ್ತೆಯು ರಾವಣನಿಗೆ ರಾಕ್ಷಸನೊಬ್ಬನಿಂದ ತಿಳಿಯಿತು.

ವಶಪಡಿಸಿಕೊಳ್ಳು ಎಂಬುದು 'ಜಯವಾಯಿತು' ಎಂಬುದನ್ನು ಸೂಚಿಸುವದು.

| | | | | |
|---|---|---|---|---|
| ಹತಾಶಳಾಗು | " | 'ಕಾರ್ಯನಿಂತಿತು' | " | " |
| ಕಂಗಾಲಾಗು | " | 'ಕೆಟ್ಟಸ್ಥಿತಿ ಒದಗಿತು' | " | " |
| ದಿಗಿಲು ಬೀಳು | " | 'ಕೌತುಕವಾಯಿತು' | " | " |
| 'ಶರಣು ಬಾ' | " | 'ತಾನು ಶೂರನು' | " | " |

---

## ೪೨. ವಿಲಿಯಮ್ ಟೆಲ್

ಪ್ರತಿಯೊಬ್ಬನಲ್ಲಿ ದೇಶ ಭಕ್ತಿಯು ಅವಶ್ಯವಾಗಿರತಕ್ಕದ್ದು. ಅದರಿಂದಲೇ ತನ್ನ ಹಾಗು ನಾಡಿನ ಉದ್ಧಾರ. ಈ ಬಗ್ಗೆ ಒಳ್ಳೆ ಉದಾಹರಣೆಯೆಂದರೆ—ತನ್ನಲ್ಲಿಯ ಮೇಲಾದ ದೇಶಭಕ್ತಿಯಿಂದ ವಿಲಿಯಮ್ ಟೆಲ್ ನೆಂಬ ಸ್ವಿತ್ಸರ್ಲಂಡದ ನಿವಾಸಿಯೊಬ್ಬನು ಅನೇಕ ಕಷ್ಟಗಳನ್ನು ಹೊಂದಿದರೂ ತನ್ನ ದೇಶಾಭಿಮಾನ ಬಿಡದೆ ತನ್ನ ದೇಶವನ್ನು ಉದ್ಧಾರ ಮಾಡಿದನು. ಅವನ ಚರಿತ್ರೆಯು ಈ ಪಾಠದಲ್ಲಿ ಬರೆದಿದೆ.

## ಕಠಿಣ ಶಬ್ದ ಪರಿಚಯು

ಸ್ವತಂತ್ರ = ಇನ್ನೊಬ್ಬರ ಆಳಿಕಿ ನಲ್ಲಿ ಇರದೆ ಇದ್ದ ಸ್ಥಿತಿ
ಹಿಮಾಚ್ಛಾದಿತ = ಬರ್ಫದಿಂದ ಮುಚ್ಚಿದ
ದಬ್ಬಾಳಿಕೆ = ಒತ್ತಾಯ ಶಿಕ್ಷೆಗ ಳಿಂದ ರಾಜ್ಯವಾಳುವದು
ಬಂಡಾಯ = ದಂಗೆ
ಪ್ರತಿಭಟಿಸಲು = ಎದುರಿಸಲು
ಟೊಂಕಕಟ್ಟು = ಸಿದ್ಧರಾಗು
ಗೌರವ = ದೊಡ್ಡಿಸ್ತನ
ಪರಕೀಯ = ಎರಡನೆಯವರ
ಅಪಮಾನ = ಕುಂದು
ರೇಗಿದನು = ಸಿಟ್ಟಿಗೆದ್ದನು
ಸೆರೆಮನೆ = ತುರಂಗ
ನಿರುಪಾಯನು = ಹಂಚಿಕೆಕಾಣ ದವನು
ಹಂಗುದೊರೆದು = ಆಶೆಬಿಟ್ಟು

## ಅಭ್ಯಸನಗಳ ಉತ್ತರಗಳು

೧ ಅಲ್ಲಿಯ ಉತ್ತಮವಾದ ಹವೆಯ ಮೂಲಕ ತಮ್ಮ ಆರೋಗ ಸಂಧಾರಿಸುವದಕ್ಕಾಗಿ ಅಲ್ಲಿಗೆ ಹೋಗುವರು.

೨ ಅರಸನ ಆಳಿಕೆಯು ಜನರ ಮನಸ್ಸಿಗೆ ಬರಲಿಲ್ಲ. ಅದಕ್ಕಾಗ್ಯಿ ಅವರು ಬಂಡು ಹೂಡಿದರು.

೩ ಟೆಲ್ಲನು ತನ್ನಲ್ಲಿಯ ದೇಶಾಭಿಮಾನದಿಂದ ಸ್ವಿಸ್ ಜನರಿಗೆ ಸ್ವಾತಂತ್ರ್ಯದೊರಕಿಸಿಕೊಟ್ಟು ಹೆಸರಾದನು.

---

# ೪೩. ನರಸಿಂಹ ಮೆಹತಾ

ನಮ್ಮ ದೇಶದಲ್ಲಿ ಬಹುಜನ ಸಾಧು-ಸಂತರು ತಮ್ಮಲ್ಲಿಯ ಭಕ್ತಿಭಾವ ದಿಂದ ಲೋಕೋದ್ಧಾರವನ್ನು ಮಾಡುವದಕ್ಕೆ ಹೆಣಗಾಡಿದರು. ಅವರಲ್ಲಿ ಈ ನರಸಿಂಹ ಮೆಹತಾ ಎಂಬವರೊಬ್ಬರು. ಇವರು ಕಾಠೇವಾಡದಲ್ಲಿಯ ಜುನಾಗಡ ಎಂಬ ಊರಿನವರು. ಇವರು ಅಸ್ಪೃಶ್ಯರಲ್ಲಿ ಪ್ರೇಮವುಳ್ಳವರಾಗಿದ್ದ ರಲ್ಲದೆ ಸಮಾಜ ಸುಧಾರಣೆಯಲ್ಲಿ ಮನಸ್ಸು ಹಾಕಿದ್ದರು. ಅವರ ಚರಿತ್ರೆಯು ಈ ಪಾಠದಲ್ಲಿ ಬರೆದಿದೆ.

## ಶಬ್ದಾರ್ಥ ಪರಿಚಯ

ಸೌರಾಷ್ಟ್ರ = ಈಗಿನ ಕಾಠೇವಾಡದ ಮೊದಲಿನ ಹೆಸರು
ಅಣ್ಣನಹೆಂಡತಿ = ಅತ್ತಿಗೆ
ಮಗ್ನರಾಗು = ಯಾವದೊಂದು ವಿಷಯದಲ್ಲಿ ತಲ್ಲೀನರಾಗು
ಪ್ರಾರ್ಥನೆ = ಬೇಡಿಕೆ
ಕೇರಿ=ವಾಸ್ತವ್ಯಸ್ಥಾನ ಓಣಿ
ಮುಗ್ಧರಾಗು = ಆಶ್ಚರ್ಯದ ಒಂದು ಲಕ್ಷಣ
ನಂಬಿಕೆ = ವಿಶ್ವಾಸ
ಧರ್ಮಪತ್ನಿ=ವಿಧಿಯಿಂದ ಲಗ್ನವನ್ನು ಮಾಡಿಕೊಂಡ ಹೆಂಡತಿಯು
ಸ್ವರ್ಗಸ್ಥಳು=ಮರಣಹೊಂದಿದವಳು
ಶಿರೋಮಣಿ = ರತ್ನಗಳಲ್ಲಿ ಶ್ರೇಷ್ಠ
ವಾದಿಸು=ಚರ್ಚಿಮಾಡು
ವಿಘ್ನ = ತೊಂದರೆ
ಭಕ್ತಾಗ್ರಣಿ = ಭಕ್ತರಲ್ಲಿ ಶ್ರೇಷ್ಠ
ಯಾತ್ರಿಕ = ಕ್ಷೇತ್ರಗಳಿಗೆ ಹೋಗುವವ
ಶೇಟ = ಗುಜರಾತಿಯ ವ್ಯಾಪಾರಿ
ಹುಂಡಿ=ಹಣದ ವ್ಯವಹಾರ ಬಳಿಕೆಗೆ ನಡಿಸುವ ಕಾಗದ (ಯಾದಿ, ಚೀಟಿ)
ದಂತಕಥೆ = ಒಬ್ಬರಿಂದೊಬ್ಬರು ಹೇಳುತ್ತ ಬಂದದ್ದು
ಮನವರಿಕೆ = ಮನಸಿಗೆ ತಿಳಿಯುವದು

## ಅಭ್ಯಸನಗಳ ಉತ್ತರಗಳು

೧ ತಾನು ಅಣ್ಣನ ಹೆಂಡತಿಯಿಂದ ಅನಾದರ ಹೊಂದಿ ಮನಸ್ಸನ್ನು ವೈರಾಗ್ಯಕ್ಕೆ ಸೇರಿಸಿಕೊಂಡು ಹೋದನು.

೨ ಹರಿಜನರು ನೀವು ನಮ್ಮ ವಾಸ್ತವ್ಯವಿದ್ದಲ್ಲಿಗೆ ಬಂದು ದೇವರ ಲೀಲೆಗಳನ್ನು ಕುರಿತು ಕೊಂಡಾಡಬೇಕು. ಎಂದು ಕೇಳಿಕೊಂಡರು.

೩ ಮೆಹತಾನು ನಾಗರ ಸಮಾಜದಲ್ಲಿಯೊಬ್ಬನಾಗಿದ್ದನು. ತನ್ನ ಸಮಾಜದ ರೀತಿರಿವಾಜುಗಳನ್ನು ಬಿಟ್ಟು ಕೀಳು ಕುಲವಾದ ಅಸ್ಪೃಶ್ಯರೊಂದಿಗೆ ಬೆರೆತು ಹೋದುದರಿಂದ ಆದರಿಂದ ತಮ್ಮ ಕುಲಕ್ಕೆ ಕೀಳುತನವು ಪ್ರಾಪ್ತವಾಗುವದೆಂಬ ತಿಳುವಳಿಕೆಯಿಂದ ಅವರು ಮೆಹತಾನಿಗೆ ತೊಂದರೆ ಕೊಡಹತ್ತಿದರು.

೪ ದೇವರ ಧ್ಯಾನಕ್ಕೆ ಉಪಾಧಿಗಳಿರತಕ್ಕದ್ದಲ್ಲ. ಹೆಂಡಿರು-ಮಕ್ಕಳು ಹೋದುದರಿಂದ ದೇವರ ಸ್ಮರಣೆಗೆ ಒಳ್ಳೆ ಅನುಕೂಲವಾಯಿತೆಂದು ಮೆಹತಾನು ತನ್ನ ಮನಸ್ಸಿಗೆ ಸಮಾಧಾನ ಮಾಡಿಕೊಂಡನು.

೫ ವೀರ ಹನುಮನು ರಾಮನ ಭಕ್ತಾಗ್ರಣಿಯಾಗಿದ್ದನು.
ದೇವಭಕ್ತಿಯಲ್ಲಿ ಮಗ್ನನಾದವನಿಗೆ ಮುಕ್ತಿಯಾಗುವದು.
ಕೈಕೊಂಡ ಕಾರ್ಯವು ನಿಷ್ಫಲವುಳ್ಳದ್ದಾಗಬಾರದು.
ಗಣಪನು ವಿಘ್ನಗಳನ್ನು ನಾಶಪಡಿಸುವನು.
ಮೂರ್ಖ ಮನುಷ್ಯನು ಮುಗ್ಧನಾಗಿರಲು ಸಾಕು.

## ೪೪. ನೀತಿವಚನಗಳು

ಈ ಪಾಠದಲ್ಲಿ ಶಿವಶರಣರ ವಚನಗಳನ್ನು ಹೇಳಿದೆ.

### ಸರಳ ಅನುವಾದವು

"ಸರೋವರಗಳು ಕಮಲಗಳಿಂದ ಚೆಂದ ಕಾಣುವವು; ಚಂದ್ರನಿಂದ ಮುಗಿಲು ಅಂದರೆ ಆಕಾಶವು ಶೋಭಿಸುವದು ಸಾಗರಗಳಲ್ಲಿ ನೀರಿನ ತೆರೆಗ ಳುಂಟಾಗುತ್ತಿದ್ದರೆ ಆ ಸಮುದ್ರಗಳು ಮನೋಹರವಾಗಿ ಕಾಣುವವು. ಅದ ರಂತೆ ಸ್ತ್ರೀಗೆ ಒಳ್ಳೆಯ ಗುಣಗಳೂ ಶಿವಭಕ್ತನ ಹಣೆಗೆ ಭಸ್ಮವೂ ಭೂಷಣ ವಾಗಿರುವವು."

ಚಕ್ರವಾಕ ಪಕ್ಷಿಗಳು ಬೆಳದಿಂಗಳ ಕಾಂತಿಗಾಗಿ ಹಾತೊರೆಯುತ್ತವೆ.

ಸಮುದ್ರವು ಸೂರ್ಯನ ಉದಯ ಹೊಂದುವದನ್ನು ಬಯಸುತ್ತದೆ.

ಭ್ರಮರ (ಗುಂಗೀಹುಳು)ಗಳು ಹೂ ಮಕರಂದಕ್ಕಾಗಿ ತೊಳಲಾ ಡುತ್ತವೆ.

(ಇವೆಲ್ಲವುಗಳಂತೆ) ದೇವ! ನಾನು ನಿನ್ನನ್ನು ಯಾವಾಗಲೂ ನೆನೆ ಯುವ ಚಿಂತೆಯುಳ್ಳವನು. ದೇವಾ! (ಅಜ್ಞಜನರು) ಕಲ್ಲಿನಲ್ಲಿ ಕಟೆದು ಮಾಡಿದ ಹಾವಿನ ಮೇಲೆ ಹಾಲು ಸುರಿಸುವರು. ಅದೇ ನಿಜವಾದ ಹಾವು ಅವರ ಕಣ್ಣಿಗೆ ಕಂಡರೆ ಅದನ್ನು ಹೊಡೆದು ಕೊಲ್ಲುವರು. (ಅದರಂತೆ) ಮನುಷ್ಯ ರೂಪದ ಜಂಗಮನು ಹಸಿದು ಬಂದರೆ (ಅವನಿಗೆ ಉಣ್ಣಲಿಕ್ಕದೆ)

‘ನಡೆ’ ಎನ್ನುವರು. ಆದರೆ ಅವರೇ ಲಿಂಗಕ್ಕೆ ಅನ್ನವನ್ನು ನೈವೇದ್ಯ ತೋರಿಸುವರು.

ಗಂಧದ ಕಟ್ಟಿಗೆಯನ್ನು ಕಡಿದು ಅದನ್ನು ಸಾಣೆಯ ಕಲ್ಲಿನ ಮೇಲೆ ತಿಕ್ಕಿದರೆ ಆ ಗಂಧದ ಕಟ್ಟಿಗೆಯು ತನ್ನಲ್ಲಿರುವ ಸುವಾಸನೆಯನ್ನು ಕೊಡದೆ ಇರುವದೇನು?

ಬಂಗಾರವನ್ನು ಕಾಸಿ, ಬಡಿದು, ಕಡಿದು, ಒರೆಗಲ್ಲಿಗೆ ತಿಕ್ಕಿ ಅದನ್ನು ಹಲವು ಪರಿಯಿಂದ ವ್ಯಥೆ ಪಡಿಸಿದರೂ ಅದು ತನ್ನಲ್ಲಿಯ ಗುಣವನ್ನು ಬಿಡುವದೇ? ಅಂದರೆ ಆ ಬಂಗಾರವು ದೋಷಯುಕ್ತವಾಗುವದೇ?

ಕಬ್ಬಿನ ಗಳವನ್ನು ಸಣ್ಣಾಗಿ ಕಡಿದು ಚೂರುಮಾಡಿ, ಗಾಣದಲ್ಲಿ ಹಾಕಿ ರಸಹಿಂಡಿ, ಕೊಪ್ಪರಿಗೆಯಲ್ಲಿ ಹಾಕಿ ಕಾಸಿ, ಕಾಲುಗಳಿಂದ ಮೆಟ್ಟಿ ತುಳಿದರೂ ಅದರಲ್ಲಿಯ ‘ಸಿಹಿ’ ಎಂಬ ರುಚಿಯು ಎಂದಾದರೂ ನಾಶವಾಗುವದೇ?

ಅದರಂತೆ ದೇವಾ! ನನ್ನನ್ನು ಬೇಕಾದವರು ಜೀವದಿಂದ ದೂರ ಮಾಡಲಿ, ನನಗೆ ಕಷ್ಟ ಪಡಿಸಲಿ, ಏನು ಬೇಕಾದದ್ದನ್ನು ಮಾಡಿದರೂ ನಾನು ನಿನ್ನನ್ನು ನಮಸ್ಕರಿಸುವದನ್ನು ಬಿಡುವದಿಲ್ಲ.

( ಈ ಪಾಠಕ್ಕೆ ಅಭ್ಯಾಸಗಳಿಲ್ಲ )

### ಕಠಿಣ ಶಬ್ದಾರ್ಥಗಳು

| | |
|---|---|
| ನೈದಿಲೆ = ಕಮಲ | ಚಕೋರ = ಚಕ್ರವಾಕ ಪಕ್ಷಿ |
| ಶೃಂಗಾರ = ಭೂಷಣ | ಅಂಬುಧಿ = ಸಮುದ್ರ |
| ನೊಸಲು = ಹಣೆ | ಭಾನು = ಸೂರ್ಯ |
| ವಿಭೂತಿ = ಭಸ್ಮ | ಭ್ರಮರ = ಗುಂಗೀಹುಳ |
| ದಿಟ = ನಿಜ | ಬಂಡ = ಹೂವಿನ ಮಕರಂದ |
| ಕಂಪು = ಸುವಾಸ | ಸಂದು = ಗಣ್ಣು |
| ಸುವರ್ಣ = ಬಂಗಾರ | ನೊಂದು = ಕಷ್ಟಬಟ್ಟು |
| ಒರೆದೊಡೆ = ತಿಕ್ಕಿದರೆ | ಶರಣು = ನಮಸ್ಕಾರ |
| ಕಳಂಕ = ದೋಷ | ಮಾಣೆ = ಬಿಡಲಾರೆ |

